# ಶ್ರೀರಂಗಪಟ್ಟಣ ಪ್ರದೇಶದೊಳಗಿನ ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಬೆಳವಣಿಗೆಗಳು – ಒಂದು ಅಧ್ಯಯನ

(ಇತಿಹಾಸ ಎಂ.ಫಿಲ್ ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ)

ಸಂಶೋಧಕ
ಹೆಚ್.ಎಸ್. ಶಿವಕುಮಾರ್

ಮಾರ್ಗದರ್ಶಕರು
ಡಾ. ಶ್ರೀಕಂಠ





ಕರ್ನಾಟಕ ಸಂಘ (ರಿ), ಮಂಡ್ಯ.
. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)
2007-2008

# ಶ್ರೀರಂಗಪಟ್ಟಣ ಪ್ರದೇಶದೊಳಗಿನ ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಬೆಳವಣಿಗೆಗಳು – ಒಂದು ಅಧ್ಯಯನ

(ಇತಿಹಾಸ ಎಂ.ಫಿಲ್ ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ)



ಸಂಶೋಧಕ
ಹೆಚ್.ಎಸ್. ಶಿವಕುಮಾರ್

ಮಾರ್ಗದರ್ಶಕರು
ಡಾ. ಶ್ರೀಕಂಠ







ಕರ್ನಾಟಕ ಸಂಘ (ರಿ), ಮಂಡ್ಯ.
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)
2007-2008

# ಮಾರ್ಗದರ್ಶಕರ ಪ್ರಮಾಣಪತ್ರ

"ಶ್ರೀರಂಗಪಟ್ಟಣ ಪ್ರದೇಶದೊಳಗಿನ ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಬೆಳವಣಿಗೆಗಳು: ಒಂದು ಅಧ್ಯಯನ" ಎಂಬ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್. ಪದವಿಗಾಗಿ ಶ್ರೀ ಹೆಚ್.ಎಸ್.ಶಿವಕುಮಾರ ಅವರು ನನ್ನ ಮಾರ್ಗದರ್ಶನ ದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ಮಂಡ್ಯ

ದಿನಾಂಕ: 10.09.08

Sreekanth

**(ಡಾ.ಶ್ರೀಕಂಠ)**
ಉಪನ್ಯಾಸಕರು, ಇತಿಹಾಸ ವಿಭಾಗ,
ಮಹಾರಾಜ ಕಾಲೇಜು,
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು.

# ಸಂಶೋಧಕನ ಪ್ರಮಾಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2007-08 ನೇ ಸಾಲಿಗೆ ಇತಿಹಾಸ ಎಂ.ಫಿಲ್ ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು "ಶ್ರೀರಂಗಪಟ್ಟಣ ಪ್ರದೇಶದೊಳಗಿನ, ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಬೆಳವಣಿಗೆಗೆಗಳು: ಒಂದು ಆಧ್ಯಯನ" ವಿಷಯವನ್ನು ಆಯ್ಕೆ ಮಾಡಿಕೊಂಡು ಡಾ. ಎನ್. ಶ್ರೀಕಂಠರವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತ ಕಾಲಿಕೆಗಳಲ್ಲಿ ಪ್ರಕಟಿಸಿರುವುದಿಲ್ಲ ಮತ್ತು ಕನ್ನಡ ವಿಶ್ವ ವಿದ್ಯಾಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಸ್ಥಳ : ಮಂಡ್ಯ
ದಿನಾಂಕ : 10-09-08

(ಹೆಚ್.ಎಸ್. ಶಿವಕುಮಾರ)
ಸಂಶೋಧಕ, ಚರಿತ್ರೆ ವಿಭಾಗ
ಕರ್ನಾಟಕ ಸಂಘ (ರಿ) ಮಂಡ್ಯ
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ-ಮಾನ್ಯತೆ ಪಡೆದಿದೆ.)

# ಶ್ರೀರಂಗಪಟ್ಟಣ ಪ್ರದೇಶದೊಳಗಿನ ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಬೆಳವಣಿಗೆಗಳು – ಒಂದು ಅಧ್ಯಯನ

**ಅಧ್ಯಾಯ 1**

- ಪೀಠಿಕೆ
- ಅಧ್ಯಯನದ ಸ್ವರೂಪ
- ಅಧ್ಯಯನದ ವ್ಯಾಪ್ತಿ
- ಆಧಾರಗಳು
- ಚಾರಿತ್ರಿಕ ಹಿನ್ನಲೆ

**ಅಧ್ಯಾಯ 2**

- ಶ್ರೀರಂಗಪಟ್ಟಣದ ಆರ್ಥಿಕ ನೆಲೆಗಟ್ಟು
- ಕೃಷಿ, ಕೈಗಾರಿಕೆಗಳು, ವಾಣಿಜ್ಯ ವ್ಯಾಪಾರ
- ಕೋಟೆಯ ಒಳಗಿನ ಸಾರಿಗೆ ವ್ಯವಸ್ಥೆ

**ಅಧ್ಯಾಯ 3**

- ಶ್ರೀರಂಗಪಟ್ಟಣದ ಸಾಮಾಜಿಕ ವರ್ಗಗಳು
- ಅಗ್ರಹಾರದ ಬ್ರಾಹ್ಮಣರು
- ಆಳುವ ವರ್ಗ, ಅಧಿಕಾರ ವರ್ಗ, ಊಳಿಗವರ್ಗ, ವ್ಯಾಪಾರಿ ವರ್ಗ ಇತರೆ

**ಅಧ್ಯಾಯ 4**

- ಧಾರ್ಮಿಕ ಕೇಂದ್ರವಾಗಿ ಶ್ರೀರಂಗಪಟ್ಟಣ
- ಶ್ರೀ ವೈಷ್ಣವರು ಮತ್ತು ಅವರ ಸಂಘಸಂಸ್ಥೆಗಳು
- ಶೈವರು ಮತ್ತು ಅವರ ಸಂಘಸಂಸ್ಥೆಗಳು
- ಜೈನ ಧರ್ಮ, ಮುಸ್ಲಿಂರು ಮತ್ತು ಅವರ ಸಂಘಸಂಸ್ಥೆಗಳು, ಕ್ರೈಸ್ತ ಧರ್ಮ,
- ಕೋಟೆಯೊಳಗಿನ ಜಾನಪದ ಧಾರ್ಮಿಕ ಕುರುಹುಗಳು

**ಅಧ್ಯಾಯ 5**

- ಉಪಸಂಹಾರ

**ಅನುಬಂಧಗಳು**

- ಗ್ರಂಥಸೂಚಿ
- ಭೂಪಟಗಳು

# ಅಧ್ಯಾಯ-1
# ಅಧ್ಯಯನದ ಸ್ವರೂಪ

ದಕ್ಷಿಣ ಭಾರತದ ಇತಿಹಾಸದಲ್ಲಿ ಶ್ರೀರಂಗಪಟ್ಟಣಕ್ಕೆ ತನ್ನದೇ ಆದ ವಿಶಿಷ್ಟವಾದ ಸ್ಥಾನವಿದೆ. ಮಧ್ಯಕಾಲೀನ ಯುಗದಲ್ಲಿ ಅನೇಕ ರಾಜವಂಶಗಳ ರಾಜಧಾನಿಯಾಗಿ ಮೆರೆದು ಭವ್ಯವಾದ ಪರಂಪರೆಯನ್ನು ಹೊಂದಿದ ಈ ನಗರ ಗಂಗರು, ಹೊಯ್ಸಳರ ಆಳ್ವಿಕೆಯು ಒಳಗೊಂಡಂತ ವಿಜಯನಗರ ಸಾಮ್ರಾಟರ, ವೈಸ್ರಾಯಿಗಳಿಗೆ, ಮೈಸೂರು ಒಡೆಯರಿಗೆ, ಹೈದರಾಲಿ, ಟಿಪ್ಪುಸುಲ್ತಾನರುಗಳಿಗೆ ರಾಜಕೀಯ ಸ್ಥಿರತೆಯನ್ನು ಗಳಿಸಿಕೊಟ್ಟಿತು. ಈ ಅಂತದಲ್ಲಿ ಶ್ರೀರಂಗಪಟ್ಟಣ ಸ್ಥಳೀಯವಾಗಿ ಅಲ್ಲದೆ ಅಂತರರಾಷ್ಟ್ರೀಯ ಮಟ್ಟದ ಖ್ಯಾತಿಯನ್ನು ಪಡೆದುಕೊಂಡಿತು. ಇದರ ಕುರುಹಾಗಿ ಕೋಟೆಗಳು, ಅರಮನೆ, ಮದ್ದುಗುಂಡಿನ ಮನೆ, ಉಗ್ರಾಣಗಳು, ದೇವಾಲಯಗಳು, ಮಸೀದಿಗಳು ಅದರ ಗತಕಾಲದ ವೈಭವದ ಮೇಲೆ ಬೆಳಕು ಚೆಲ್ಲಿದರೆ ರಾಜಕೀಯ ಸ್ಥಿರತೆಯ ಬೆನ್ನೆಲುಬಾಗಿ ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಮೌಲ್ಯಗಳನ್ನು ತನ್ನೊಳಗೆ ಹುದುಗಿಸಿಕೊಂಡಿದೆ.

ಇಂತಹ ಭವ್ಯವಾದ ನೆಲೆಗಟ್ಟನ್ನು ಹೊಂದಿದ ಶ್ರೀರಂಗಪಟ್ಟಣ ಸಹನೆ, ಸಹಬಾಳ್ವೆ ಮತ್ತು ಸಮನ್ವಯಗಳಂತಹ ಪ್ರಾಚೀನ ಭಾರತೀಯ ಮೌಲ್ಯಗಳನ್ನು ಎತ್ತಿ ಹಿಡಿದಿದೆ. ಏಕೆಂದರೆ ಶ್ರೀರಂಗಪಟ್ಟಣವು ಕನ್ನಡನಾಡಿನ ಇತಿಹಾಸದಲ್ಲಿ ತನ್ನದೇ ಆದ ವೈಶಿಷ್ಟ್ಯತೆಗಳಿಂದ ಕೂಡಿ ಇತಿಹಾಸದಲ್ಲಿ ಮೆರೆದು ಇಂದೂ ಮುಸುಕಾಗಿದ್ದರೂ ತನ್ನ ಹಿಂದಿನ ಹಿರಿಮೆ ಕರಿಮೆಗಳನ್ನು ಅಲ್ಪಸ್ವಲ್ಪವಾದರೂ ಉಳಿಸಿಕೊಂಡು ಬಂದಿದೆ. ಇಂತಹ ಪ್ರಸಿದ್ಧ ಸ್ಥಳಗಳನ್ನು ನಾವು ಏಕೆ ಸಂಶೋಧನೆಯ ವಸ್ತುವನ್ನಾಗಿ ಆಯ್ಕೆ ಮಾಡಿಕೊಳ್ಳಬಾರದು?

ಶ್ರೀರಂಗಪಟ್ಟಣದ ಸ್ಥಳೀಯ ಅಧ್ಯಯನವನ್ನು ಏಕೆ ಆಯ್ಕೆ ಮಾಡಿಕೊಳ್ಳಲಾಯಿತು ಎಂಬ ಪ್ರಶ್ನೆ ಹೇಳುವುದು ಸಹಜ. ತಲಕಾಡು, ಐಹೊಳೆ, ಪಟ್ಟದಕಲ್ಲು, ಬಾದಾಮಿ, ಹಳೇಬೀಡು, ಬೇಲೂರು, ಬನವಾಸಿ ವಿಜಯನಗರ ಮೊದಲಾದ ಪ್ರಧಾನವಾಗಿದ್ದ ರಾಜಕೀಯ ನೆಲೆಯಾಗಿದ್ದ ನಗರಗಳು ಕಾಲಕ್ರಮೇಣ ತನ್ನ ಹಿಂದಿನ ಘನತೆಯನ್ನು ವೈಭವವನ್ನು ಮತ್ತು ಶಕ್ತಿಯನ್ನು ಕಳೆದುಕೊಂಡು ಕುಗ್ರಾಮಗಳಾಗಿವೆ. ಆದರೆ ಶ್ರೀರಂಗಪಟ್ಟಣ ರಾಜಕೀಯ ಅಸ್ಥಿತ್ವವನ್ನು ಕಳೆದುಕೊಂಡರೂ ಇಂದೂ ಸಹ ಪ್ರಾಚೀನತೆ ಮತ್ತು ಆಧುನಿಕ ಎರಡನ್ನೂ ತನ್ನಲ್ಲಿ ಸಮನ್ವಯಗೊಳಿಸಿಕೊಂಡು

ಇಂದೂ ಸಹ ಜೀವಂತವಾಗಿ ಕನ್ನಡನಾಡಿನಲ್ಲಿ ಉಳಿದಿರುವುದರಿಂದ ಸಂಶೋಧಕರ ಆಸಕ್ತಿ ಅತ್ತ ಕಡೆ ಆಕರ್ಷಿಸಿದರೆ ಆಶ್ಚರ್ಯವಿಲ್ಲ.

ಬೇರೆಬೇರೆ ಐತಿಹಾಸಿಕ ಸ್ಥಳಗಳಿಗಿಂತ ಶ್ರೀರಂಗಪಟ್ಟಣ ತನ್ನ ವೈಶಿಷ್ಟ್ಯಗಳಿಂದ ಸಂಶೋಧಕನ ಕುತೂಹಲ ಕೆರಳಿಸುತ್ತದೆ. ಶ್ರೀರಂಗಪಟ್ಟಣವನ್ನು ಆಳಿದ ಆಡಳಿತ ವರ್ಗಗಳು ರಾಜ್ಯದ ಬೆಳವಣಿಗೆಯ ಬೆನ್ನಲುಬಾಗಿ ಕೃಷಿ, ಕೈಗಾರಿಕೆ, ವ್ಯಾಪಾರ, ವಾಣಿಜ್ಯದಂತ ಕ್ಷೇತ್ರಕ್ಕೆ ಯಥೇಚ್ಛವಾದ ಪ್ರೋತ್ಸಾಹ ನೀಡಿ ಆ ಮೂಲಕ ರಾಜಕೀಯ ಸ್ಥಿರತೆಯನ್ನು ಸಾಧಿಸಿದರು. ಅದೇ ರೀತಿ ಸಾಮಾಜಿಕ ವರ್ಗಗಳ ಸ್ಥಾನಮಾನಗಳು, ಧಾರ್ಮಿಕ ಪಂಥದ ಕುರುಹುಗಳು ಶ್ರೀರಂಗಪಟ್ಟಣ ವಲಯದಲ್ಲಿ ಕಂಡುಬಂದವು. ಇಂತಹ ಅಂಶಗಳನ್ನು ತನ್ನೊಳಗೆ ಹುದುಗಿಸಿಕೊಂಡಿರುವುದನ್ನು ನೋಡಿದರೆ ಯಾರನ್ನಾದರೂ ಸಂಶೋಧನೆ ಮಾಡಲು ತನ್ನತ್ತ ಕರೆದರೆ ಆಶ್ಚರ್ಯವಿಲ್ಲ. ಈ ಎಲ್ಲಾ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಪ್ರಸ್ತುತ ಅಧ್ಯಯನದ ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಈ ಅಧ್ಯಯನವನ್ನು 5 ಅಧ್ಯಾಯಗಳನ್ನಾಗಿ ವಿಂಗಡಿಸಲಾಗಿದೆ. ಒಂದನೆಯ ಅಧ್ಯಾಯ ಪೀಠಿಕೆಯ ರೂಪದಲ್ಲಿದೆ ಮತ್ತು ಈ ಅಧ್ಯಾಯದಲ್ಲಿ ನಾಲ್ಕು ಪ್ರಮುಖ ಅಂಶಗಳನ್ನು ಚರ್ಚಿಸ ಲಾಗಿದೆ. ಅದರಲ್ಲಿ ಒಂದನೆಯದಾಗಿ ಅಧ್ಯಯನದ ಸ್ವರೂಪವನ್ನು ಕುರಿತದ್ದಾಗಿದ್ದು, ಪ್ರಮುಖವಾಗಿ ಪ್ರಸ್ತುತ ಸಂಶೋಧನೆಯ ವಿಷಯವನ್ನು ಆಯ್ಕೆ ಮಾಡಿಕೊಂಡಿರುವುದಕ್ಕೆ ಕಾರಣಗಳನ್ನು ವಿವರಿಸ ಲಾಗಿದೆ. ಎರಡನೆಯದಾಗಿ, ವ್ಯಾಪ್ತಿಯನ್ನು ಇಲ್ಲಿ ಚರ್ಚಿಸಲಾಗುತ್ತಿದೆ. ಮೂರನೆಯದಾಗಿ, ಪ್ರಸ್ತುತ ಅಧ್ಯಯನಕ್ಕೆ ಆಕರಗಳ ಪ್ರಾಮುಖ್ಯತೆಯನ್ನು ಇಲ್ಲಿ ಮಾಡಿಕೊಡಲಾಗುತ್ತಿದೆ. ನಾಲ್ಕನೆಯದಾಗಿ, ಶ್ರೀರಂಗಪಟ್ಟಣದ ಚಾರಿತ್ರಿಕ ಹಿನ್ನಲೆಯನ್ನು ಇಲ್ಲಿ ಸ್ಥೂಲವಾಗಿ ನಿರೂಪಿಸಲಾಗುತ್ತದೆ.

ಒಂದು ಸ್ಥಳದ ರಾಜಕೀಯ ವ್ಯವಸ್ಥೆಗೆ ಸ್ಥಿರತೆಗೆ ಮುಖ್ಯವಾಗಿ ಬೇಕಾಗಿರುವುದು ಅಲ್ಲಿನ ಆರ್ಥಿಕ ನೆಲೆಗಟ್ಟು. ಈ ದೃಷ್ಟಿಯಿಂದ ಶ್ರೀರಂಗಪಟ್ಟಣದ ಆರ್ಥಿಕ ನೆಲೆಗಟ್ಟಿಗೆ ಸಂಬಂಧಿಸಿದಂತೆ, ಪ್ರಧಾನವಾಗಿ ಕೃಷಿ, ಕೈಗಾರಿಕೆ, ವಾಣಿಜ್ಯ, ವ್ಯಾಪಾರ, ಸಾರಿಗೆ, ನಾಣ್ಯ ಮೊದಲಾದ ವಿಷಯಗಳನ್ನು ಎರಡನೆಯ ಅಧ್ಯಾಯದಲ್ಲಿ ನಿರೂಪಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ, ಶ್ರೀರಂಗಪಟ್ಟಣದ ಸಾಮಾಜಿಕ ವರ್ಗಗಳು ಹೇಗೆ ತಮ್ಮ ತಮ್ಮ ಜಾತಿ ಕಸುಬು ಮತ್ತು ಮತಧರ್ಮಗಳಿಗನುಸಾರವಾಗಿ ಸಾಮಾಜಿಕ ಜೀವನವನ್ನು ನಿರ್ವಹಿಸಿ ಕೊಂಡಿದ್ದವು ಎಂಬುದನ್ನು ಚಿತ್ರಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ, ಸಮಾಜದ ಬಹುಮುಖ್ಯ ಅಂಗವಾಗಿದ್ದ ಧರ್ಮದ ಪಾತ್ರ ಏನು ಎಂಬುದನ್ನು ಧಾರ್ಮಿಕ ಕೇಂದ್ರವಾಗಿ ಶ್ರೀರಂಗಪಟ್ಟಣ ನಿರ್ವಹಿಸಿದ ಪಾತ್ರವನ್ನು ಪ್ರಸ್ತಾಪಿಸಲಾಗಿದೆ. ಶ್ರೀ ವೈಷ್ಣವ, ಶೈವ, ಶಾಕ್ತ, ಜಾನಪದ, ಮುಸ್ಲಿಂ ಮತ್ತು ಕ್ರೈಸ್ತ ಮತಧರ್ಮಗಳ ಕುರುಹುಗಳ ಬಗೆಗೆ ~~ಈ ಅಧ್ಯಾಯದಲ್ಲಿ~~ ಚರ್ಚೆ ಮಾಡಲಾಗಿದೆ.

ಐದನೆಯ ಅಧ್ಯಾಯವು ಉಪಸಂಹಾರ ರೂಪದಲ್ಲಿದ್ದು ಒಟ್ಟು ಅಧ್ಯಯನದಿಂದ ವ್ಯಕ್ತ ವಾಗುವ ಸಾಮಾನ್ಯ ತೀರ್ಮಾನಗಳನ್ನು ಇಲ್ಲಿ ನಿರೂಪಿಸಲಾಗಿದೆ. ಆನಂತರ ಗ್ರಂಥಪಟ್ಟಿ, ಅನುಬಂಧ ಗಳನ್ನು ನೀಡಲಾಗಿದೆ.

## ಆಧಾರಗಳು

ಶ್ರೀರಂಗಪಟ್ಟಣದ ಪ್ರದೇಶದೊಳಗಿನ ಆರ್ಥಿಕ, ಸಾಮಾಜಿಕ, ಧಾರ್ಮಿಕ ನೆಲೆಗಟ್ಟಿನ ಅಧ್ಯಯನಕ್ಕೆ ಆಧಾರಗಳು ವೈವಿಧ್ಯಮಯವಾಗಿವೆ. ಅವುಗಳಲ್ಲಿ ಮುಖ್ಯವಾದವು ಶಾಸನಗಳು. ಶಾಸನಗಳಲ್ಲಿ ಎರಡು ವಿಧ (1) ಶಿಲಾಶಾಸನಗಳು (2) ತಾಮ್ರ ಶಾಸನಗಳು. ಶ್ರೀರಂಗಪಟ್ಟಣದಲ್ಲಿ ಎರಡೂ ರೀತಿಯ ಶಾಸನಗಳು ದೊರೆಯುತ್ತವೆ. ಅಗ್ರಹಾರಗಳು ಮತ್ತು ದೇವಾಲಯಗಳಿಗೆ ಸಂಬಂಧಿಸಿದಂತೆ ಮುಖ್ಯವಾಗಿ ದೊರೆಯುವ ಶಾಸನಗಳು ತಾಮ್ರಶಾಸನಗಳು ಎಂದು ಹೇಳಬಹುದು. ವಿಜಯನಗರದ ಅರಸರು ಮತ್ತು ಮೈಸೂರಿನ ಒಡೆಯರು ಶಿಲಾಶಾಸನಗಳನ್ನು ಹಾಕಿಸಿದ್ದಾರೆ. ಹೆಚ್ಚಿನ ಶಾಸನಗಳು ದಾನ ಶಾಸನಗಳ ರೂಪದಲ್ಲಿವೆ.

## ದಾನಶಾಸನಗಳನ್ನು 3 ವಿಧಗಳಾಗಿ ವಿಂಗಡಿಸಬಹುದು

1) ವಿಜಯನಗರದ ಅರಸರು ಮತ್ತು ಮೈಸೂರಿನ ಒಡೆಯರು ನೀಡಿದ ದಾನ ಶಾಸನಗಳು.
2) ಅರಸರ ಮಂತ್ರಿಗಳು, ದಂಡನಾಯಕರು ಅಥವಾ ನಾಯಕರು ಅಥವಾ ಇತರ ಸಣ್ಣಪುಟ್ಟ ಅಧಿಕಾರಿಗಳು ನೀಡಿದ ದಾನಗಳನ್ನು ತಿಳಿಸುವ ಶಾಸನಗಳೂ.
3) ಪ್ರಜೆಗಳು ನೀಡಿದ ದಾನಗಳ ದಾಖಲೆಯ ಶಾಸನಗಳು.

**ಶ್ರೀರಂಗಪಟ್ಟಣದ ಶಾಸನಗಳನ್ನು ಮತಧರ್ಮಗಳಗನುಸಾರವಾಗಿ ವಿಂಗಡಿಸಬಹುದು**

1) ಶ್ರೀ ವೈಷ್ಣವರ ದಾನಶಾಸನಗಳು

2) ವೈಷ್ಣವರ ದಾನಶಾಸನಗಳು

3) ಜೈನರ ದಾನಶಾಸನಗಳು

4) ಶಾಕ್ತರ ದಾನಶಾಸನಗಳು

5) ಜಾನಪದ ದೇವಣಿಗಳಿಗೆ ನೀಡಿದ ದಾನಶಾಸನಗಳು

6) ಇಸ್ಲಾಂ ಧರ್ಮದ ಅನುಯಾಯಿಗಳ ಶಾಸನಗಳು

ಒಟ್ಟಿನಲ್ಲಿ ಹೇಳುವುದಾದರೆ ಶಾಸನಾಧಾರಗಳು ಅತೀಮುಖ್ಯ ದಾಖಲೆಗಳಾಗಿವೆ.

ಶಾಸನಗಳ ನಂತರ ನಮಗೆ ಸಾಹಿತ್ಯ ಕೃತಿಗಳು ಬಹುಮುಖ್ಯ ಆಧಾರಗಳಾಗಿವೆ. ಶ್ರೀರಂಗ ಪಟ್ಟಣ ಪರಿಸರದಲ್ಲಿ ಅನೇಕ ಧಾರ್ಮಿಕ ಮತ್ತು ಲೌಕಿಕ ಕೃತಿ ಅಲ್ಲಿನ ಪಂಡಿತರುಗಳಿಂದ ರಚನೆ ಯಾಗಿವೆ. ಸಾಹಿತ್ಯ ಕೃತಿಗಳಲ್ಲಿ ಅನೇಕ ಐತಿಹಾಸಿಕ ಕೃತಿಗಳಾಗಿದ್ದೂ, ಅಲ್ಲಿನ ಆರ್ಥಿಕ, ಸಾಮಾಜಿಕ, ಧಾರ್ಮಿಕ ನೆಲೆಗಟ್ಟುಗಳ ಮೇಲೆ ಬೆಳಕು ಚೆಲ್ಲುತ್ತವೆ. ಚಿಕ್ಕದೇವರಾಜ ವಂಶಾವಳಿ, ಕಂಠೀರವ ನರಸರಾಜ ವಿಜಯ, ಚಿಕ್ಕದೇವರಾಜ ಭಿನ್ನಪಂ, ಚಿಕ್ಕದೇವರಾಜ ವಿಜಯ, ಅಪ್ರತಿಮ ವೀರಚರಿತಂ ಮುಖ್ಯವಾದವು. ಇವುಗಳು ಶ್ರೀರಂಗಪಟ್ಟಣವನ್ನು ಆಳಿದ ಮೈಸೂರಿನ ಒಡೆಯರ ಬಗ್ಗೆ ಅನೇಕ ವಿಷಯಗಳನ್ನು ತಿಳಿಸುತ್ತವೆ. ಅಲ್ಲದೆ ಟಿಪ್ಪುಸುಲ್ತಾನ್ ಗ್ರಂಥ ಶ್ರೀರಂಗಪಟ್ಟಣದ ವಿವಿಧ ಮಜಲುಗಳ ಬಗ್ಗೆ ಬೆಳಕು ಚೆಲ್ಲುತ್ತದೆ.

ಸಾಹಿತ್ಯಿಕ ಕೃತಿಗಳನ್ನು ಬಿಟ್ಟರೆ ನಮಗೆ ವಿದೇಶೀ ಪ್ರವಾಸಿಗರ ಗ್ರಂಥಗಳು ಈ ಅಧ್ಯಯನಕ್ಕೆ ಸಹಾಯಕವಾಗಿವೆ. ಸಿನ್ನಾಮಿ ಮತ್ತು ಬುಕ್ಯಾನನ್ ಬರೆದ ಗ್ರಂಥಗಳು ಪ್ರಸ್ತುತ ಅಧ್ಯಯನಕ್ಕೆ ಉತ್ತಮ ಕೃತಿಗಳಾಗಿವೆ. ಬುಕ್ಯಾನನ್ ಗ್ರಂಥವಂತೂ ಯಾವ ಆಧಾರಗಳು ನೀಡದ ಅನೇಕ ವಿವರ ಗಳನ್ನು ಪ್ರಸ್ತಾಪಿಸುತ್ತದೆ. ಒಟ್ಟಿನಲ್ಲಿ ಪ್ರಸ್ತುತ ಅಧ್ಯಯನಕ್ಕೆ ವಿವಿಧ ಮೂಲಗಳಿಂದ ವಿವಿಧ ರೀತಿಯ ಆಧಾರಗಳು ಸಹಾಯಕವಾಗಿವೆ.

**ಶ್ರೀರಂಗಪಟ್ಟಣದ ಚಾರಿತ್ರಿಕ ಹಿನ್ನಲೆ**

ಶ್ರೀರಂಗಪಟ್ಟಣ ತನ್ನದೇ ಆದ ಚಾರಿತ್ರಿಕ ಹಿನ್ನಲೆಯನ್ನು ಹೊಂದಿದೆ. ಸ್ಥಳ ಪುರಾಣದ ಪ್ರಕಾರ ಇದಕ್ಕೆ 'ಗೌತಮಕ್ಷೇತ್ರ'ವೆಂದು ಮತ್ತೊಂದು ಹೆಸರಿಂದ ಕರೆಯಲಾಗುತ್ತಿತ್ತು. ಪೂರ್ವದಲ್ಲಿ

ಗೌತಮ ಋಷಿ ಇಲ್ಲಿಯ ಆದಿರಂಗನನ್ನು ಪೂಜಿಸಿ ಇಲ್ಲಿ ವಾಸವಾಗಿದ್ದರಿಂದ ಇದಕ್ಕೆ ಗೌತಮಕ್ಷೇತ್ರ ವೆಂದೂ ಹೆಸರು ಬಂದಿದ್ದರೂ, ಇತಿಹಾಸದ ಪುರಾಣಗಳಲ್ಲಿ ಇದರ ಅಂಶ ಅಡಕವಾಗಿದೆ. ಇದರ ಹೊಳಹೊಕ್ಕು ನೋಡಿದಾಗ ಪುರಾತನ ಕಾಲದಲ್ಲಿ ಕಾವೇರಿಯು ಈ ಕ್ಷೇತ್ರದಲ್ಲಿ ಮಹಾವಿಷ್ಣುವನ್ನು ಕುರಿತು ತಪಸ್ಸು ಮಾಡಿ ಒಲಿಸಿಕೊಂಡಳಂತೆ. ಇದರ ನೆನಪಿಗಾಗಿ ಸ್ವಾಮಿಯು ಸ್ವಯಂ ವ್ಯಕ್ತಿ ಮೂರ್ತಿಯಾಗಿ ಅಲ್ಲಿ ಉದ್ಭವಿಸಿದನಂತೆ. ಆದರೆ ಅವನ ವಿಗ್ರಹವು ಜನರ ಕಣ್ಣಿಗೆ ಅಗೋಚರವಾಗಿ ವಾಲ್ಮೀಕದಲ್ಲಿ ಮರೆಯಾಯಿತು. ಹಾಗೆಯೇ ಎಷ್ಟೋ ಸಂವತ್ಸರಗಳು ಉರುಳಿಹೋಗಿ ಒಮ್ಮೆ ಗೌತಮಮುನಿ ಸಮಿತಿಯು ತಮ್ಮ ಮೇಲೆ ಹೊರಿಸಿದ್ದ ಗೋಹತ್ಯ ದೋಷವನ್ನು ನೀಗಿಸಿಕೊಳ್ಳ ಲೋಸುಗ ಹಲವು ಪುಣ್ಯಧಾಮಗಳನ್ನು ಸಂದರ್ಶಿಸುತ್ತಾ ಇಲ್ಲಿಗೂ ಬಂದು ತುಳಸಿ ವನಾಂತರ ದಲ್ಲಿದ್ದ ಸ್ವಾಮಿಯನ್ನು ಕಂಡು ಕಾಮಧೇನುವಿನ ಕ್ಷೀರಧಾರೆಯಿಂದ ಅಲ್ಲಿನ ಹುತ್ತವನ್ನು ಕರಗಿಸಿ ವಿಗ್ರಹವನ್ನು ಬೆಳಕಿಗೆ ತಂದರು. ಆನಂತರ ಅದಕ್ಕೆ ಗೌತಮಕ್ಷೇತ್ರವೆಂದು ಹೆಸರಾಯಿತ್ತೆಂದು ಪ್ರತೀತಿ ಇದೆ.

ಮತ್ತೊಂದು ಅಂಶದ ಪ್ರಕಾರ, ಕಾವೇರಿಯು ವಿಷ್ಣುವಿನ ಪಾದಸೇವೆಗಾಗಿ ಅಲ್ಲಿಯೇ ನೆಲೆ ನಿಂತಳು. ಅಂದಿನಿಂದ ಅದು ಭೂವೈಕುಂಠವಾಯಿತು. ಗೌತಮಕ್ಷೇತ್ರದಲ್ಲಿ ಕಾವೇರಿಗೆ ಹೆಚ್ಚಿನ ಪ್ರಾಶಸ್ತ್ಯವಿದ್ದು, ವೈಕುಂಠದ 'ವಿರಜಾ' ಎಂಬ ದಿವ್ಯ ನದಿಯ ನಿರ್ಮಲತೆ, ಪಾವನತೆಗಳನ್ನು ಭಕ್ತರು ತನ ನಂಬಿ ಪಾಪಗಳನ್ನು ತೊಳೆದುಕೊಳ್ಳಲು ಕಾವೇರಿಯಿಂದ ಬಂದು ನೆಲೆಗೊಂಡಳಂತೆ. ಒಮ್ಮೆ ಚಿತ್ರಸೇನಾ, ಚಿತ್ರರಥರೆಂಬಿಬ್ಬರು ಗಂಧರ್ವರು ಶಚಿಯನ್ನು ಮೋಹಿಸಹೋಗಿ ಇಂದ್ರನಿಂದ ಶಾಪ ಕ್ಕೀಡಾಗಿ ಭೂಮಿಯಲ್ಲಿ ರಾಕ್ಷಸರಾಗಿ ಹುಟ್ಟಿದರಂತೆ. ಅವರು ಪೂರ್ಣಿಮೆಯ ದಿನದಂದು ಕಾವೇರಿ ಯಲ್ಲಿ ಸ್ನಾನಮಾಡಿ ಶ್ರೀರಂಗನಾಥನನ್ನು ದರ್ಶನ ಮಾಡಿ, ಶಾಪಮುಕ್ತರಾಗಿ ತಮ್ಮ ದಿವ್ಯಕಾರ್ಯ ವನ್ನು ಮರಳಿ ಪಡೆದರು. ಇವೆಲ್ಲಾ ಪುರಾಣೋತ್ತರ ವಿಚಾರಗಳಾದರೂ ಶ್ರೀರಂಗಪಟ್ಟಣಕ್ಕೆ ಗೌತಮ ಋಷಿಯ ಪಾದಸ್ಪರ್ಶದಿಂದ ಒಂದು ಪುಣ್ಯಕ್ಷೇತ್ರವಾಗಿ ಬೆಳೆದು ಇಂದಿಗೂ 'ಗೌತಮಕ್ಷೇತ್ರ'ವೆಂದೂ ಪ್ರಸಿದ್ಧಿಯನ್ನು ಪಡೆದುಕೊಂಡಿದೆ.

ಇಲ್ಲಿಯವರೆಗೆ ನಾವು ಕೆಲವು ಪುರಾಣೋತ್ತರ ವಿಚಾರಗಳನ್ನು ತಿಳಿದುಕೊಂಡವರಾದರೂ ಕೆಲವು ಚಾರಿತ್ರಿಕ ಅಂಶಗಳು ಗೋಚರಿಸುತ್ತವೆ. ಶ್ರೀರಂಗಪಟ್ಟಣ ಆಯಾಕಟ್ಟಿನ ಪ್ರದೇಶವಾಗಿದ್ದು ಅನೇಕ ರಾಜವಂಶಗಳು ಆಳ್ವಿಕೆಯನ್ನು ನಡೆಸಿವೆ. ಮುಖ್ಯವಾಗಿ ಗಂಗರು, ಹೊಯ್ಸಳರು, ವಿಜಯ

ನಗರದ ಅರಸರು, ಸಾಮಂತರು, ಮೈಸೂರಿನ ಒಡೆಯರು, ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಹಾಗೂ ಬ್ರಿಟಿಷರಿಗೆ ಒಳಪಟ್ಟಂತೆ ವಿವಿಧ ರಾಜವಂಶಗಳು ಆಳ್ವಿಕೆಯನ್ನು ನಡೆಸಿವೆ.

ಪ್ರಾಚೀನ ಕಾಲದಿಂದಲೂ ಒಂದಲ್ಲ ಒಂದು ರಾಜವಂಶಗಳ ಆಡಳಿತಕ್ಕೆ ಒಳಪಟ್ಟಿದ್ದರೂ, ದಟ್ಟವಾದ ಕಾಡಿನಿಂದ ಆವೃತ್ತವಾಗಿದ್ದ ಶ್ರೀರಂಗಪಟ್ಟಣ ಒಂದು ಸಣ್ಣ ಊರಾಗಿತ್ತು. ಕ್ರಿ.ಶ. 894ರಲ್ಲಿ ಗಂಗರ ದಂಡನಾಯಕ ತಿರುಮಲಯ್ಯ ಅದನ್ನು ಒಂದು ಪ್ರಾಂತ್ಯವನ್ನಾಗಿ ಮಾಡಿಕೊಂಡು ಅಲ್ಲಿ ಆಳ್ವಿಕೆ ನಡೆಸಿ, ದೇವಸ್ಥಾನಗಳು, ಮಂಟಪಗಳನ್ನು ಕಟ್ಟಿಸಿ ಯಶಸ್ವಿಯಾಗಿ ರಾಜ್ಯಭಾರ ಮಾಡಿದ ಎನ್ನಲಾಗಿದೆ. ಶ್ರೀರಂಗನಾಥನ ನವರಂಗ, ಮಂಟಪ ಮತ್ತು ತಿರುಮಲದೇವ ದೇವಸ್ಥಾನಗಳನ್ನು ಪುನರ್‌ರಚಿಸಿ ಗೌತಮಕ್ಷೇತ್ರವೆಂದು ಪ್ರಸಿದ್ಧಿ ಪಡೆದಿದ್ದ ಶ್ರೀರಂಗಪಟ್ಟಣಕ್ಕೆ 'ಶ್ರೀರಂಗಪುರ' ಎಂದು ನಾಮಕರಣ ಮಾಡಿ ಆಳ್ವಿಕೆ ನಡೆಸತೊಡಗಿದನು.[1] ನಂತರ ಆಗತಾನೇ ಪ್ರವರ್ಧಮಾನಕ್ಕೆ ಬಂದ ಹೊಯ್ಸಳರು ತಮ್ಮ ಅಧೀನಕ್ಕೆ ತೆಗೆದುಕೊಂಡು ಆಳ್ವಿಕೆ ನಡೆಸಿದರೆನ್ನಲಾಗಿದೆ.

## ಹೊಯ್ಸಳರ ಆಳ್ವಿಕೆ

ಗಂಗರ ಆಳ್ವಿಕೆಗೆ ಒಳಪಟ್ಟಿದ ಶ್ರೀರಂಗಪಟ್ಟಣವನ್ನು ತಮ್ಮ ನೇರ ಆಳ್ವಿಕೆಗೆ ತೆಗೆದುಕೊಂಡ ಮೇಲೆ ಕಾಡಿನಿಂದ ಆವೃತ್ತವಾಗಿದ್ದ ಆ ಪ್ರಾಂತ್ಯವನ್ನು ಒಂದು ಅಷ್ಟಗ್ರಾಮವನ್ನಾಗಿ ಪರಿವರ್ತಿಸಿದರು. ಕ್ರಿ.ಶ. 1117ರಲ್ಲಿ ಚೋಳರ ಹಿಡಿತದಿಂದ ತಪ್ಪಿಸಿಕೊಂಡು ರಾಮಾನುಜಾಚಾರ್ಯರು ಅಲೆಯುತ್ತಿದ್ದಾಗ ಅದೇ ವೇಳೆಗೆ ವೈಷ್ಣವ ಧರ್ಮವನ್ನು ಅವಲಂಬಿಸಿದ ಹೊಯ್ಸಳ ದೊರೆ ವಿಷ್ಣುವರ್ಧನನು ರಾಮಾನುಜಾಚಾರ್ಯರಿಗೆ ಆ ಪ್ರಾಂತ್ಯ (ಅಷ್ಟಗ್ರಾಮ) ವನ್ನು ಬಿಟ್ಟುಕೊಟ್ಟು ಆ ಗ್ರಾಮದ ಮೇಲ್ವಿ ಚಾರಣೆಗಾಗಿ ಹೆಬ್ಬಾರರು ಅಥವಾ ಪ್ರಭುಗಳೋನ್ನು ನೇಮಿಸಿದ ಸಂಗತಿ ತಿಳಿದುಬರುತ್ತದೆ.[2] ನಂತರ ವಿಷ್ಣುವರ್ಧನನ ತಮ್ಮನಾದ ಉದಯಾದಿತ್ಯನು ಅದರ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದ ನೆಂದು ಶಾಸನವೊಂದು ತಿಳಿಸುತ್ತದೆ. ಶ್ರೀರಂಗಪಟ್ಟಣ ರಂಗನಾಥಸ್ವಾಮಿಯ ದೇವಸ್ಥಾನದ ಗರ್ಭ ಗೃಹದ ಹೊರಗೋಡೆಯ ದಕ್ಷಿಣ ತಳಪಾದದ ಕೆಳಪಟ್ಟಿಯಲ್ಲಿ ಕ್ರಿ.ಶ. 1210ಕ್ಕೆ ಸೇರಿರುವ ಒಂದು ಶಾಸನ ದೊರೆಯುತ್ತದೆ. ಈ ಶಾಸನ ಹೊಯ್ಸಳರ ಕಾಲದ್ದಾಗಿದ್ದು ತಮಿಳು ಮತ್ತು ಸಂಸ್ಕೃತ ಭಾಷೆ ಯಲ್ಲಿದೆ. ವೀರಬಲ್ಲಾಳನ ದೇವರ ಆಳ್ವಿಕೆಯ ಕಾಲವನ್ನು ಈ ಶಾಸನ ಸೂಚಿಸುತ್ತದೆ. ಆರಂಭದಲ್ಲಿ ವಿಷ್ಣುವನ್ನು ಕುರಿತಂತೆ ಸ್ತುತಿ ಪದ್ಯ ಇದೆ. ಇದರಿಂದ ಶ್ರೀರಂಗಪಟ್ಟಣವು 12ನೇ ಶತಮಾನದಲ್ಲಿ ಶ್ರೀ ವೈಷ್ಣವರ ನೆಲೆಯಾಗಿ ಇತ್ತೆಂದು ಹೇಳಬಹುದು. ಈ ಶಾಸನವು ಬ್ರಹ್ಮಪುರಂ ಅಥವಾ ಚತುರ್ಮುಖ

ನಾರಾಯಣ ಚತುರ್ವೇದಿ ಮಂಗಳಂ ಎಂಬ ಹೆಸರಿನ ಗ್ರಾಮವನ್ನು ಶ್ರೀರಂಗಪಟ್ಟಣದ ಭಟ್ಟರಿಂದ ಕ್ರಯಕ್ಕೆ ಕೊಂಡುಕೊಂಡು ಸ್ಥಳ ಪ್ರಭುವಾಗಿದ್ದ ವರಂತರು ಪೆರುಮಾನ್ ಎಂಬುವವನು ದಾನ ಕೊಟ್ಟಿದ್ದನ್ನು ಈ ಶಾಸನ ದಾಖಲಿಸುತ್ತದೆ. ಗ್ರಾಮವನ್ನು 65 ವೃತ್ತಿಗಳಾಗಿ ವಿಭಾಗಿಸಿ ಅದರಲ್ಲಿ 33 ವೃತ್ತಿಗಳನ್ನು 88 ಬ್ರಾಹ್ಮಣ ಪಂಡಿತರಿಗೆ ನೀಡಲಾಗಿದೆ. ದಾನ ನೀಡಿದ ಮೇಲೆ ಗ್ರಾಮದ ಹೆಸರು 'ಅಳಗಿಯ ಪೆರುಮಾಳ್ ಪುರಂ' ಎಂಬುದಾಗಿ ಮಾರ್ಪಟ್ಟಿತು.[3]

ಕಾಲಾನಂತರ ಶ್ರೀರಂಗಪಟ್ಟಣ ಪ್ರಾಂತ್ಯ ಕ್ರಿ.ಶ. 1454ರಲ್ಲಿ ನಾಗಮಂಗಲದ ಪ್ರಭುತಿಮ್ಮಣ್ಣನಿಗೆ ವರ್ಗವಾಗಿ ವಿಜಯನಗರದ ಅರಸರುಗಳಿಂದ 'ಡಣ್ಣಾಯಕ' ಎಂಬ ಗೌರವವನ್ನು ಸಂಪಾದಿಸಿ, ತನಗೆ ಸಿಕ್ಕಿದ ದ್ರವ್ಯದಿಂದ ಶ್ರೀರಂಗಪಟ್ಟಣದ ಸುತ್ತ ಭದ್ರವಾದ ಕೋಟೆಯನ್ನೂ, ಶ್ರೀರಂಗನಾಥನ ದೇವಾಲಯದ ಹೊರ ಪ್ರಾಕಾರದ ಗೋಡೆಯನ್ನು, ದೊಡ್ಡ ಗೋಪುರವನ್ನು ಮತ್ತು ಮಹಾದ್ವಾರ ಗಳನ್ನು ಕಟ್ಟಿಸಿದನು. ತಿಮ್ಮಣ್ಣನ ವಂಶಸ್ಥರು ಕ್ರಿ.ಶ. 1495ರವರೆಗೆ ಅದನ್ನು ಆಳಿದರು. ಆನಂತರ ವಿಜಯನಗರದ ಅರಸರ ನೇರ ಆಳ್ವಿಕೆಗೆ ಶ್ರೀರಂಗಪಟ್ಟಣ ಒಳಪಟ್ಟಿತು.[4]

## ವಿಜಯನಗರ ಅರಸರ ಆಳ್ವಿಕೆ

ಈ ವೇಳೆಗಾಗಲೇ ಹೊಯ್ಸಳರ ಸಾಮಂತರಾಗಿದ್ದ ಹಕ್ಕಬುಕ್ಕರು ಅವರ ಹಿಡಿತದಿಂದ ತಪ್ಪಿಸಿ ಕೊಂಡು ಸ್ವತಂತ್ರವಾದ ಪ್ರಾಂತ್ಯವನ್ನು ಕಟ್ಟಿದರು. ಮುಂದೆ ನವಭಾರತದಲ್ಲಿ ಭವ್ಯವಾಗಿ ಮೆರೆದು ಸಾಮ್ರಾಜ್ಯಕ್ಕೆ ಭದ್ರವಾದ ತಳಪಾಯ ಹಾಕಿದರು. ಅದೇ ವಿಜಯನಗರ ಸಾಮ್ರಾಜ್ಯ. ವಿಜಯನಗರ ಸಾಮ್ರಾಜ್ಯ ಪ್ರವರ್ಧಮಾನಕ್ಕೆ ಬರುತ್ತಿದ್ದಂತೆ ಕೆಲವು ಪಾಳೆಯ ಪಟ್ಟನ್ನು ತಮ್ಮ ವಶಕ್ಕೆ ತೆಗೆದು ಕೊಂಡರು. ಈ ಸಂದರ್ಭದಲ್ಲಿ ಶ್ರೀರಂಗಪಟ್ಟಣವು ವಿಜಯನಗರ ಅರಸರ ಕೈ ಸೇರಿತು. ವಿಜಯ ನಗರ ಸಾಮ್ರಾಜ್ಯದ ಅಧಿಪತಿಯಾದ ಕೃಷ್ಣದೇವರಾಯನಿಗೆ ಮಕ್ಕಳಿಲ್ಲವಾದ ಕಾರಣ ಅಳಿಯ ರಾಮ ರಾಯನಿಗೆ ಪಟ್ಟಾಭಿಷೇಕವಾಯಿತು. ನಂತರ ಅಳಿಯ ರಾಮರಾಯನು ತನ್ನ ತಮ್ಮ ತಿರುಮಲರಾಯ ನಿಗೆ ವಹಿಸಿಕೊಟ್ಟನು. ನಂತರ ತಿರುಮಲರಾಯನು ತನ್ನ ನಾಲ್ವರು ಮಕ್ಕಳಿಗೆ ತನ್ನ ಸಾಮ್ರಾಜ್ಯವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿ ಶ್ರೀರಂಗರಾಯನಿಗೆ ಶ್ರೀರಂಗಪಟ್ಟಣದ ಸೀಮೆಯನ್ನು ವಹಿಸಿದನು. ಎಂ.ಹೆಚ್.ಕೃಷ್ಣರವರ ಪ್ರಕಾರ ಕ್ರಿ.ಶ. 15ನೇ ಶತಮಾನದ ಆರಂಭದಲ್ಲಿ ತಿರುಮಲದೇವ ಎಂಬ ಅಕ್ಕ ಪಕ್ಕದಲ್ಲಿದ್ದ ಪಾಳೇಗಾರರು ವಿಜಯನಗರದ ದೇವರಾಯನ ಅನುಮತಿಯಿಂದ ಶ್ರೀರಂಗಪಟ್ಟಣವನ್ನು ಆಕ್ರಮಿಸಿಕೊಂಡು ಅಲ್ಲಿ ಒಂದು ಕೋಟೆಯನ್ನು ಕಟ್ಟಿಸಿದನು. ಕಾಲಾನಂತರ ಅರವೀಡು ವಂಶದ

ಕಾಲದಲ್ಲಿ ಶ್ರೀರಂಗಪಟ್ಟಣ ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿಯ ಪ್ರತಿನಿಧಿಯ ಆಡಳಿತ ಕೇಂದ್ರ ವಾಯಿತು.[5]

ಹೀಗೆ ಶ್ರೀರಂಗಪಟ್ಟಣವನ್ನು ವಹಿಸಿಕೊಂಡ ಮೇಲೆ ಅದರ ಆಗುಹೋಗುಗಳ ಬಗ್ಗೆ ಹೆಚ್ಚಿನ ಗಮನ ಹರಿಸಿದನು. ಕ್ರಿ.ಶ. 1495ರಲ್ಲಿ ನಾಗಮಂಗಲದ ಪ್ರಭು ತಿಮ್ಮಣ್ಣನಿಂದ ನಿರ್ಮಿತವಾದುದೆನ್ನ ಲಾಗಿದ್ದ ಕೋಟೆಯ ದುರಸ್ಥಿ ಕಾರ್ಯ, ಶ್ರೀರಂಗನಾಥನ ಒಳಪ್ರಕಾರವನ್ನು ನಿರ್ಮಿಸಿ ಮುಂಭಾಗದಲ್ಲಿ ಕೈಶಾಲೆ ಮಂಟಪವನ್ನು, ಮಹಾದ್ವಾರಕ್ಕೆ 5 ಮೆಟ್ಟಿಲುಗಳನ್ನು ಕಟ್ಟಿಸಿ ಉಭಯ ಪಾರ್ಶ್ವಗಳಲ್ಲಿ ಆನೆ ಗಳನ್ನು ನಿರ್ಮಿಸಿದರು ಎನ್ನಲಾಗಿದೆ. ಒಟ್ಟಿನಲ್ಲಿ ಶ್ರೀರಂಗಪಟ್ಟಣವು ಸೇರಿಕೊಂಡಂತೆ ಒಂದು ಆಯಾ ಕಟ್ಟಿನ ಪ್ರದೇಶವನ್ನು ವಿಜಯನಗರ ಕಾಲದಲ್ಲಿ ಗುರುತಿಸಬಹುದು.

## ಮೈಸೂರು ಒಡೆಯರ ಆಳ್ವಿಕೆ

ಹೀಗೆ 14ನೇಯ ಶತಮಾನದಿಂದ ಕ್ರಿ.ಶ.1610ರವರೆಗೆ ಶ್ರೀರಂಗಪಟ್ಟಣವು ಹಂತಹಂತವಾಗಿ ತನ್ನ ಖ್ಯಾತಿಯನ್ನು ಪಡೆದುಕೊಳ್ಳುತ್ತಾ 17ನೇಯ ಶತಮಾನದ ಆರಂಭಕ್ಕೆ ಅಲ್ಲಿ ವಿಜಯನಗರ ಪ್ರತಿನಿಧಿ ಅಥವಾ ವೈಸ್ರಾಯಿ ವಾಸಮಾಡುತ್ತಿದ್ದ ವಿಷಯ ದಾಖಲೆಗಳಿಂದ ಸ್ಪಷ್ಟವಾಗುತ್ತದೆ. ಮೈಸೂರಿನ ಒಡೆಯರು ಕ್ರಿ.ಶ.1610ಕ್ಕೆ ಮುಂಚೆ ವಿಜಯನಗರಕ್ಕೆ ಅಧೀನರಾಗಿ ನಡೆಯುತ್ತಿದ್ದು, ಶ್ರೀರಂಗಪಟ್ಟಣದಲ್ಲಿ ವಿಜಯನಗರದ ರಾಜಪ್ರತಿನಿಧಿಯು ಮೈಸೂರಿನ ಒಡೆಯರನ್ನು ನಿಯಂತ್ರಿಸು ತ್ತಿದ್ದನು. ಮೈಸೂರಿನ ಒಡೆಯರು ವಿಜಯನಗರಕ್ಕೆ ಪೊಗದಿಯನ್ನು ವರ್ಷವರ್ಷವೂ ಸಲ್ಲಿಸ ಬೇಕಾಗಿತ್ತು. ಅರವೀಡು ವಂಶದವರ ಕಾಲದಲ್ಲಿ ವಿಜಯನಗರ ದುರ್ಬಲವಾಗುತ್ತಾ ಸಾಗಿತು. ಈ ಸಂದರ್ಭವನ್ನು ಬಳಸಿಕೊಂಡು ಮೈಸೂರಿನ ಒಡೆಯರು ಸ್ವತಂತ್ರರಾಗಲು ಪ್ರಯತ್ನಿಸಿದರು. ಉದಾ ಹರಣೆಗೆ, ಮೊದಲನೇ ರಾಜ ಒಡೆಯರಿಗಿಂತ ಮೊದಲ ರಾಜನೆನಿಸಿದ 5ನೇ ಚಾಮರಾಜ ಒಡೆಯರು ಶ್ರೀರಂಗ ಪಟ್ಟಣದ ಖಜಾನೆಗೆ ತಲುಪಿಸಬೇಕಾಗಿದ್ದ ಪೊಗದಿಯನ್ನು ಪಾವತಿ ಮಾಡಿರಲಿಲ್ಲ. ರಾಜ ಒಡೆಯರು ಅಧಿಕಾರವನ್ನು ಸ್ವೀಕರಿಸಿದ ಮೇಲೆ ವಿಜಯನಗರಕ್ಕೆ ಪೊಗದಿಯನ್ನು ಕೊಟ್ಟ ಅಲ್ಲಿನ ರಾಜಪ್ರತಿನಿಧಿ ಯೊಂದಿಗೆ ಉತ್ತಮ ಬಾಂಧವ್ಯವನ್ನು ಬೆಳೆಸಿಕೊಂಡರು.

ಈ ಮಧ್ಯ ವಿಜಯನಗರದ ಚಕ್ರವರ್ತಿಯಾದ 2ನೇಯ ವೆಂಕಟಪತಿರಾಯನಿಗೂ, ಶ್ರೀರಂಗ ಪಟ್ಟಣದಲ್ಲಿ ಅಧಿಕಾರಿಯಾಗಿದ್ದ ಅವನ ಸೋದರನ ಮಗ ತಿರುಮಲನಿಗೂ ವಿರಸ ಉಂಟಾಗಿ

ರಾಜಕೀಯ ವಾತಾವರಣ ಹದಗೆಟ್ಟಿತು. ಈ ವಿರೋಧ ಪರಿಸ್ಥಿತಿಯನ್ನು ರಾಜ ಒಡೆಯರು ತಮ್ಮ ಸ್ವಂತ ಲಾಭಕ್ಕಾಗಿ ಉಪಯೋಗಿಸಿಕೊಂಡರು. ರಾಜ ಒಡೆಯರು ವೆಂಕಟಪತಿರಾಯನ ಸ್ನೇಹವನ್ನು ಸಂಪಾದಿಸಿ ಶ್ರೀರಂಗಪಟ್ಟಣದ ಪ್ರಾಂತ್ಯವನ್ನು ಆಳಲು ತಮಗೆ ಅಧಿಕಾರವನ್ನು ದಯಪಾಲಿಸಬೇಕೆಂದು ಬೇಡಿಕೊಂಡರು. ವೆಂಕಟಪತಿರಾಯನು ಈ ಹಕ್ಕನ್ನು ಒಂದು ಸನ್ನದು ಮೂಲಕ ರಾಜ ಒಡೆಯರಿಗೆ ಕೊಟ್ಟನು. ಶ್ರೀರಂಗಪಟ್ಟಣದಲ್ಲಿ ತಿರುಮಲನ ಅಧಿಕಾರವು ದುರ್ಬಲವಾಗಿರುವುದನ್ನು ಕಂಡು ರಾಜ ಒಡೆಯರು ಆ ಪ್ರಾಂತ್ಯವನ್ನು ಅಪಹರಿಸಲು ಪ್ರಯತ್ನಿಸಿದರು. ಕೊನೆಗೆ ಯುದ್ಧದಿಂದ ಆ ಪ್ರಾಂತ್ಯ ವನ್ನು ರಾಜ ಒಡೆಯರು ವಶಪಡಿಸಿಕೊಂಡರೂ ಅಥವಾ ಬೇರ್ಯಾವುದೋ ವಿಧಾನದಿಂದ ಗೆದ್ದರೂ ಎಂಬ ವಿಷಯ ಇನ್ನೂ ಇತ್ಯರ್ಥವಾಗದೆ ಉಳಿದಿದೆ. ಆದರೂ ಪ್ರಚಲಿತವಾಗಿರುವ ಅಭಿಪ್ರಾಯದಂತೆ ರಾಜ ಒಡೆಯರು ತಿರುಮಲನನ್ನು ಶ್ರೀರಂಗಪಟ್ಟಣದಿಂದ ಹೊರಹಾಕಿ ಕ್ರಿ.ಶ. 1610ರಲ್ಲಿ ಅದನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡರು. ಹೀಗೆ ಶ್ರೀರಂಗಪಟ್ಟಣದೊಡನೆ ವಿಜಯನಗರದ ಸಂಪರ್ಕ ಮುಕ್ತಾಯವಾಯಿತು ಮತ್ತು ಒಡೆಯರ ರಾಜಧಾನಿಯಾಗಿ ಶ್ರೀರಂಗಪಟ್ಟಣದ ಬೆಳವಣಿಗೆ ಆರಂಭ ವಾಯಿತ್ತೆನ್ನಬಹುದು.[6]

ಶ್ರೀರಂಗಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಮೈಸೂರಿನ ಒಡೆಯರು ಕ್ರಿ.ಶ.1610 ರಿಂದ ಕ್ರಿ.ಶ.1799ರವರೆಗೆ ಆಳ್ವಿಕೆಯನ್ನು ಮಾಡಿದರು. ಈ ಅವಧಿಯಲ್ಲಿ ಶ್ರೀರಂಗ ಪಟ್ಟಣವು ಎಲ್ಲಾ ರೀತಿಯಲ್ಲೂ ಸಂಮೃದ್ಧಿ ಮತ್ತು ಅಭಿವೃದ್ಧಿಯನ್ನು ಕಂಡಿತು. ಕ್ರಿ.ಶ. 1799ರ ನಂತರ ಅದು ತನ್ನ ಸ್ಥಾನವನ್ನು ಕಳೆದುಕೊಂಡಿತು. ಏಕೆಂದರೆ ಕ್ರಿ.ಶ.1799ರ ನಂತರ ರಾಜಧಾನಿ ಯನ್ನು ಮೈಸೂರಿಗೆ ವರ್ಗಾಯಿಸಲಾಯಿತು. ಶ್ರೀರಂಗಪಟ್ಟಣದಲ್ಲಿದ್ದ ಬ್ರಿಟಿಷರು ತಮ್ಮ ಕಂಟೋ ನ್ಮೆಂಟನ್ನು ರದ್ದುಗೊಳಿಸಿದರು. ಹೀಗೆ ಅದರ ಅವನತಿ ಆರಂಭವಾಯಿತು.

## ಅಡಿಟಿಪ್ಪಣಿಗಳು

1) ತಿಮ್ಮಕವಿ – ಪಶ್ಚಿಮರಂಗ ಮಹಾತ್ಮೆ ಮತ್ತು ಚಿಕ್ಕದೇವರಾಜ ವಂಶಾವಳಿ (ಸಂ) ಎಂ.ಪಿ.ಮಂಜಪ್ಪ ಶೆಟ್ಟಿ, ಕ.ಅ.ಸಂ. ಮೈಸೂರು 1980, ಪುಟ 37.
2) ಅದೇ ಪುಟ 37, ಎಂ.ಹೆಚ್.ನಾಯಕ್ – ಕನ್ನಡ ವಿಷಯ ವಿಶ್ವಕೋಶ ಸಂ.1 ಕ.ಅ.ಸಂ. ಮೈಸೂರು 1979, ಪುಟ. 1455.
3) E.C.6 (N.S) S.1 1210 A.D
4) MIR Hussain Alikhan Kirmani – History of Tipu Sultan (See Ed) Culcutta, 1958, p.141;
   ತಿಮ್ಮಕವಿ – ಪಶ್ಚಿಮರಂಗ ಮಹಾತ್ಮೆ ಮತ್ತು ಚಿಕ್ಕದೇವರಾಜ ವಂಶಾವಳಿ (ಸಂ) ಎಂ.ಪಿ.ಮಂಜಪ್ಪಶೆಟ್ಟಿ, ಕ.ಅ.ಸಂ. ಮೈಸೂರು, 1980, ಪುಟ 38.
5) M.H.Krishna – A guide to Srirangapatna, Mysore 1937 p.3
6) ಬಿ.ರಾಮಕೃಷ್ಣರಾವ್ – ಶ್ರೀ ಮನ್ಮಹಾರಾಜರವರ ವಂಶಾವಳಿ ಭಾಗ–1, ಪು.23–28.

# ಅಧ್ಯಾಯ-2
# ಶ್ರೀರಂಗಪಟ್ಟಣದ ಆರ್ಥಿಕ ನೆಲೆಗಟ್ಟು

ಶ್ರೀರಂಗಪಟ್ಟಣದ ಅಸ್ಥಿತ್ವಕ್ಕೆ ಆಧಾರವಾದ ಆರ್ಥಿಕ ಸಂಪತ್ತು ಯಾವ ಯಾವ ಮೂಲಗಳಿಂದ ಬರುತ್ತಿತ್ತು ಎಂಬುದನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಹಾಗೆಯೇ ವಿವರಿಸುವ ಸಂದರ್ಭದಲ್ಲಿ ಶ್ರೀರಂಗಪಟ್ಟಣ ಪ್ರದೇಶದ ವ್ಯಾಪ್ತಿಯೊಳಗೆ ಬರುವ ಶಾಸನಗಳನ್ನು ಪ್ರಮುಖವಾಗಿ ಬಳಸಿಕೊಳ್ಳಲಾಗಿದೆ. ಶಾಸನಗಳಲ್ಲದೆ ಸುಮಾರು ಕ್ರಿ.ಶ. 1800ರಲ್ಲಿ ಬುಕ್ಯಾನನ್ ದಾಖಲಿಸಿರುವ ಅನೇಕ ಆರ್ಥಿಕ ವಿಷಯಗಳನ್ನು ಸಹ ಇದಕ್ಕಾಗಿ ಉಪಯೋಗಿಸಿಕೊಳ್ಳಲಾಗಿದೆ. ಶ್ರೀರಂಗಪಟ್ಟಣ ಪ್ರದೇಶದ ಆರ್ಥಿಕ ನೆಲೆಗಟ್ಟಿಗೆ ಆಧಾರವಾಗಿದ್ದುದ್ದು ಕೃಷಿ. ಕೃಷಿಯ ನಂತರ ಬರುವುದು ಕೈಗಾರಿಕೆ. ಇವೆರಡರ ಸೇತುವೆಯಂತೆ ಇದ್ದದ್ದು ವ್ಯಾಪಾರ ಮತ್ತು ವಾಣಿಜ್ಯ. ಆದುದರಿಂದ ಈ ಪ್ರಮುಖ ಅಂಶಗಳನ್ನು ಇಲ್ಲಿ ಪರಿಶೀಲಿಸಲಾಗಿದೆ.

9-10ನೇಯ ಶತಮಾನದ ಶಾಸನದಲ್ಲಿ ಕೆರೆ, ವ್ಯವಸಾಯ ಕುರಿತು ಪ್ರಸ್ತಾಪ ಬಂದಿದೆ. ಬತ್ತವನ್ನು ಬೆಳೆದು ಇಲ್ಲಿ 'ಬೆಳಿಯಕ್ಕಿ' ಉತ್ಪಾದಿಸುತ್ತಿದ್ದರು ಎಂದು ಶಾಸನದಿಂದ ಗೊತ್ತಾಗುತ್ತದೆ. ದಾನ್ಯವನ್ನು ಅಳೆಯಲು 'ಸೊಲ್ಲಿಗೆ' ಎಂಬ ಅಳತೆ ಮಾಪನವನ್ನು ಬಳಸುತ್ತಿದ್ದರು.[1] ಭೂಮಿಯನ್ನು 'ಬೆದ್ದಲು' ಮತ್ತು 'ಗದ್ದೆ' ಎಂಬುದಾಗಿ ವರ್ಗೀಕರಣ ಮಾಡುತ್ತಿದ್ದರು. 'ಬೆದ್ದಲು' ಎಂದರೆ 'ಹೊಲ'. ನೀರಾವರಿವುಳ್ಳ ಭೂಮಿಗೆ 'ಗದ್ದೆ' ಎಂದು ಕರೆಯುತ್ತಿದ್ದರು.[2] ಒಕ್ಕಲಿಗರು ಈ ಪ್ರದೇಶದಲ್ಲಿ ಕೃಷಿಯಲ್ಲಿ ತೊಡಗಿದ್ದರು. ಒಕ್ಕಲಿಗರ ಹೆಸರುಗಳು ಶಾಸನಗಳಲ್ಲಿ ಬರುತ್ತದೆ. ಉದಾಹರಣೆಗೆ ಕೇತಗೌಡ, ರಾಮಿಗೌಡ, ಶಂಭುಗೌಡ, ಮಾದಿಗೌಡ ಇವರು ಶ್ರೀರಂಗಪಟ್ಟಣದ ಬಳಿಯ ಬಸ್ತಿಪುರದ ರೈತವರ್ಗಕ್ಕೆ ಸೇರಿದ್ದರು.[3] ಕೆಲವು ವೇಳೆ ವಿಜಯನಗರದ ಅರಸರು ಈ ಪ್ರದೇಶದಲ್ಲಿ ಬ್ರಾಹ್ಮಣರಿಗೆ ಅಗ್ರಹಾರಕ್ಕೆ ಬದಲು ಅನೇಕ ತೆರಿಗೆಗಳಿಂದ ಬರುವ ಆದಾಯವನ್ನು ಕೊಡುತ್ತಿದ್ದರು. 2ನೇಯ ದೇವರಾಯನ ಕಾಲಕ್ಕೆ ಸೇರಿದ ಅಂತಹ ದಾನ ಶಾಸನವೊಂದು ಶ್ರೀರಂಗಪಟ್ಟಣದ ಶ್ರೀ ವೈಷ್ಣವರಿಗೆ ರಾಜನು 30 ಹೊನ್ನುಗಳನ್ನು ಕೊಟ್ಟ ವಿಷಯವನ್ನು ದಾಖಲಿಸುತ್ತದೆ.[4] ವ್ಯವಸಾಯಕ್ಕಾಗಿ ಈ ಪ್ರದೇಶದಲ್ಲಿ ಕಟ್ಟೆಯನ್ನು ಕಟ್ಟಿ ಕಾಲುವೆಗಳನ್ನು ತೋಡಿ ಭೂಮಿಗೆ ನೀರನ್ನು ಅರಿಸುತ್ತಿದ್ದರು. ಈ ವಿಷಯವನ್ನು ಇಲ್ಲಿನ ಶಾಸನಗಳಲ್ಲಿ ನೋಡಬಹುದು. ಉದಾ. ಒಂದು ಶಾಸನವು "ಆ ಕಟ್ಟೆಯಿಂದ ಹೋದ ಕಾಲುವೆ", ಯಡದಲ್ಲಿ ಹಾಯಿಕೊಂಡು ಆ ಕಾಲುವೆ", "ಆ ಕಾಲುವೆ ಮೇರೆಯಾಗಿ ನಡೆದು ಲೋಕ ಪಾವನಿ ಎಂಬ ಸಾಗರ ಕೂಡಿತ್ತು."[5] ಇದಲ್ಲದೆ ಕೆರೆಯ ನೀರನ್ನು ಹಾಯಿಸಿ ವ್ಯವಸಾಯ

ವನ್ನು ಮಾಡುತ್ತಿದ್ದರು. ಶಾಸನದಲ್ಲಿ ಇದರ ಪ್ರಸ್ತಾಪ ಬರುತ್ತದೆ. ಉದಾ. ರಂಗಸಮುದ್ರವೆಂಬ ಕೆರೆಯ "ತೆಂಕಣಕೊಂಡಿ"ಯಲ್ಲಿ.[6] ಶ್ರೀರಂಗಪಟ್ಟಣದ ಕೆಲವು ಶಾಸನಗಳಲ್ಲಿ ಭೂಮಿಯ ವರ್ಗೀಕರಣ ಈ ರೀತಿ ಬರುತ್ತದೆ. 'ಗದ್ದೆ', 'ಬೆದ್ದಲು', 'ತೋಟ', 'ತುಡಿಕೆ', 'ಅಣೆ', 'ಅಚ್ಚುಕಟ್ಟು', ಕಾಡಾರಂಭ, ನೀರಾರಂಭ.[7] ನೀರಾವರಿಯನ್ನು ಅವಲಂಬಿಸಿದ್ದ ಕೃಷಿ ವ್ಯವಸ್ಥೆಗೆ ನೀರಾರಂಭ ಅಥವಾ ಗದ್ದೆ ಎಂದೂ, ಮಳೆಯನ್ನಾಧರಿಸಿದ ಕೃಷಿ ವ್ಯವಸ್ಥೆಗೆ ಕಾಡರಂಭ ಅಥವಾ ಬೆದ್ದಲೂ ಎಂದೂ ಕರೆಯುತ್ತಿದ್ದರು. ತೋಟವೆಂದರೆ ತೆಂಗು, ಅಡಿಕೆ ಮತ್ತು ಮಾವು ಇವುಗಳನ್ನು ಬೆಳೆಯುತ್ತದೆ. ತಾಣ, ಪಚ್ಚೆ ಎಂದರೆ ತರಕಾರಿಗಳನ್ನು ಬೆಳೆಯುತ್ತಿದ್ದ ಕ್ಷೇತ್ರ. ಅಣೆ ಎಂದರೆ ಹರಿಯುತ್ತಿದ್ದ ನೀರಿಗೆ ಅಡ್ಡಲಾಗಿ ಒಡ್ಡು ಕಟ್ಟಿ ನೀರನ್ನು ಸಂಗ್ರಹಿಸುವ ಪದ್ಧತಿ. ಅಚ್ಚುಕಟ್ಟು ಎಂದರೆ, ಒಂದು ಕೆರೆ ಅಥವಾ ಕಾಲುವೆಯ ಕೆಳಗಿನ ನೀರುಣಿಸಿದ ಭೂಮಿಯ ವಿಸ್ತಾರಕ್ಕೆ ಅಚ್ಚುಕಟ್ಟು ಪ್ರದೇಶ ಎಂದು ಕರೆಯುತ್ತಿದ್ದರು. ಒಂದು ಕೆರೆಯ ಅಚ್ಚುಕಟ್ಟು ಎಂದರೆ ಆ ಕೆರೆಯ ಕೆಳಗಿನ ಭೂಮಿ ಆ ಕೆರೆಯಿಂದ ಪಡೆಯುವ ನೀರಿನ ವಿಸ್ತೀರ್ಣ ಎಂದು ಹೇಳಬಹುದು.

ಗ್ರಾಮಗಳಲ್ಲಿ ಕೃಷಿ ಭೂಹಿಡುವಳಿಗಳನ್ನು ಅವುಗಳ ಒಡೆಯರ ಹೆಸರಿನಲ್ಲಿ ನಿರ್ದೇಶಿಸಿರುವ ಕ್ರಮ ರೂಢಿಯಲ್ಲಿದ್ದಿತು. ಶ್ರೀರಂಗಪಟ್ಟಣದ ಶಾಸನಗಳಲ್ಲಿ ಇಂತಹ ಪದ್ಧತಿಯನ್ನು ಕಾಣಬಹುದು. ಉದಾ. ಕಮ್ಮಾರನ ಗದ್ದೆ, ಸಿದ್ದನ ಹೊಲ ಮತ್ತು ನರಸೀಗೌಡನ ಹೊಲ.[8] ಶ್ರೀರಂಗಪಟ್ಟಣ ಪ್ರದೇಶದ ಶಾಸನಗಳಲ್ಲಿ ಕೃಷಿಗೆ ಸಂಬಂಧಿಸಿದಂತೆ 'ಬೀಜವರಿ' ಎಂಬ ಮಾತು ಬರುತ್ತದೆ. ಬೀಜವರಿ ಎಂದರೆ ಒಂದು ಗೊತ್ತಾದ ಕೃಷಿ ಪ್ರದೇಶದಲ್ಲಿ ಬಿತ್ತುವ ಬೀಜದ ಪ್ರಮಾಣದ ಮೇಲೆ ಆ ಭೂಮಿಯ ಅಳತೆಯನ್ನು ನಿಗದಿಪಡಿಸುವುದು. ಉದಾ. ಒಂದು ಖಂಡುಗ ಬೀಜವರಿ ಗದ್ದೆ ಎಂದರೆ, ಒಂದು ಖಂಡುಗ ಬೀಜವನ್ನು ಬಿತ್ತುವ ಗದ್ದೆ ಎಂದು ಅರ್ಥ.[9] ತೋಟ ಎಂದರೆ ತೆಂಗು, ಮಾವು, ಅಡಿಕೆ ಮೊದಲಾದ ಬೆಳೆಗಳು ಇದ್ದಂತಹ ಜಾಗವಾಗಿತ್ತು. ತರಕಾರಿಗಳನ್ನು ಬೆಳೆಯುವ ಸ್ಥಳಕ್ಕೆ ತುಡಿಕೆ ಎಂದು ಕರೆಯುತ್ತಿದ್ದರು.[10] ಕೃಷಿ ಭೂಮಿಯನ್ನು ನೆಲಗದ್ದೆ, ಕೊಂಡದಗದ್ದೆ, ವುಂಡಿ ಮಾವಿನಗದ್ದೆ, ಅತ್ತಿಮರದಗದ್ದೆ, ಕಾರುಕಲ್ಲುಗದ್ದೆ, ಗೊಟ್ಟೆಗದ್ದೆ, ಗೊರಸಿನಗದ್ದೆ, ನುಂದಗದ್ದೆ, ಮಶಿಕಟ್ಟುಗದ್ದೆ ಮತ್ತು ಮಟ್ಟಿಲುಹೊಲ, ಹಲಸಿನ ಮರದ ಹೊಲ, ಮಶಿಕಟ್ಟು ಹೊಲ ಎಂಬುದಾಗಿ ವರ್ಗೀಕರಿಸುತ್ತಿದ್ದರು.[11]

ಸುಮಾರು 1800ರಲ್ಲಿ ಶ್ರೀರಂಗಪಟ್ಟಣಕ್ಕೆ ಬುಕ್ಯಾನನ್ ಎಂಬ ಇಂಗ್ಲೀಷ್ ಪ್ರವಾಸಿಗ ಭೇಟಿ ಕೊಟ್ಟನು. ಅವನು ಶ್ರೀರಂಗಪಟ್ಟಣ ಪ್ರದೇಶದಲ್ಲಿ ಬೆಳೆಯುತ್ತಿದ್ದ ಬೆಳೆಗಳ ಬಗೆಗೆ ಅನೇಕ ವಿವರ ಗಳನ್ನು ನೀಡಿದ್ದಾನೆ. ಅವುಗಳನ್ನು ಇಲ್ಲಿ ಪರಿಶೀಲಿಸಬಹುದು. ಶ್ರೀರಂಗಪಟ್ಟಣ ಅಷ್ಟಗ್ರಾಮ ವಿಭಾಗದ ಭಾಗವಾಗಿತ್ತು. ಇಲ್ಲಿನ ಕೃಷಿವ್ಯವಸ್ಥೆ ಉತ್ತಮ ಮಟ್ಟದ್ದಾಗಿತ್ತು.

**ಭೂಮಿಯನ್ನು 3 ರೀತಿಯಲ್ಲಿ ವಿಂಗಡಿಸುತ್ತಿದ್ದರು**

1) ನೀರಾವರಿ ಭೂಮಿ
2) ಖುಷ್ಕಿ ಭೂಮಿ
3) ಭಗಯತು ಭೂಮಿ

**ಬುಕ್ಯಾನನ್ ನಾಲ್ಕು ವರ್ಗದ ಫಲವತ್ತಾದ ಮಣ್ಣನ್ನು ಗುರ್ತಿಸಿದ್ದನು**

1) ಕಪ್ಪುಮಣ್ಣು – ಇದನ್ನು ಎರೆಮಣ್ಣು, ಕೃಷ್ಣ ಅಥವಾ ಮುಬಾಟು ಎಂದು ಕರೆಯುತ್ತಿದ್ದರು.
2) ಕೆಂಪುಮಣ್ಣು – ಇದನ್ನು ಕೆಬ್ಬೆ ಅಥವಾ ಕೆಂಪುಭೂಮಿ ಎಂದು ಕರೆಯುತ್ತಿದ್ದರು.
3) ಮರಳುಭೂಮಿ
4) ಧರೆಮಣ್ಣು - ಇದರಲ್ಲಿ ಹೆಚ್ಚು ಮರಳು ಮತ್ತು ಸಣ್ಣ ಸಣ್ಣ ಕಲ್ಲುಗಳು ಇರುತ್ತಿದ್ದವು. ನೇಗಿಲು ಈ ಭೂಮಿಯಲ್ಲಿ ಹೆಚ್ಚು ಆಳವಾಗಿ ಹೋಗುತ್ತಿರಲಿಲ್ಲ.

**ಅಷ್ಟಗ್ರಾಮ ಅಥವಾ ಶ್ರೀರಂಗಪಟ್ಟಣದ ಪರಿಸರದಲ್ಲಿ ಬೆಳೆಯುತ್ತಿದ್ದ ನೀರಾವರಿ ಬೆಳೆಗಳು ಈ ರೀತಿ ಇದ್ದವು**

(1) ಬತ್ತ (2) ಕಬ್ಬು (3) ಉದ್ದು (4) ಹೆಸರು (5) ಎಳ್ಳು (6) ತಡುಗುಣಿ

ಇವುಗಳ ಪೈಕಿ ಬತ್ತ ಹೆಚ್ಚು ಪ್ರಮುಖವಾಗಿತ್ತು.

**ನೀರಾವರಿ ಪ್ರದೇಶದಲ್ಲಿ ರೈತರು ಎರಡು ಬೆಳೆಗಳನ್ನು ಬೆಳೆಯುತ್ತಿದ್ದರು**

1) ಮಳೆಗಾಲದಲ್ಲಿ ಬೆಳೆಯುತ್ತಿದ್ದ ಹೈನು ಬೆಳೆ
2) ಬೇಸಿಗೆಯಲ್ಲಿ ಬೆಳೆಯುತ್ತಿದ್ದ ಕಾರು ಬೆಳೆ[12]

ಈ ಪ್ರದೇಶದಲ್ಲಿ ಕಾಲುವೆ, ಕೆರೆ ಮತ್ತು ಬಾವಿಗಳಿಂದ ವ್ಯವಸಾಯವನ್ನು ಮಾಡುತ್ತಿದ್ದರು. ಮಳೆಗಾಲದಲ್ಲಿ ಕಾಲುವೆಗಳು ತುಂಬಿ ಹರಿಯುವಂತೆ ಏರ್ಪಾಡು ಮಾಡಿದ್ದರು. ಶ್ರೀರಂಗಪಟ್ಟಣದ

ಪರಿಸರದಲ್ಲಿ ಅಸಂಖ್ಯಾತ ಕೆರೆಗಳು ಇದ್ದವೆಂದು ಬುಕ್ಯಾನನ್ ಬರೆದಿದ್ದಾನೆ. ನೀರಾವರಿಯ ಸೌಲಭ್ಯ ದಿಂದ ಇಲ್ಲಿ ಹೈನು ಬೆಳೆ ಸಂವೃದ್ಧಿಯಾಗಿತ್ತು. ಬೇಸಿಗೆಯಲ್ಲಿ ಕಬ್ಬನ್ನು ಬೆಳೆಯಲು ಅಲ್ಪ ಪ್ರಮಾಣದ ನೀರನ್ನು ಕಾದಿರಿಸಿ ಕೊಳ್ಳುತ್ತಿದ್ದರು. ಕಾಲುವೆಗಳಿಂದ ಪೋಲಾಗುವ ನೀರನ್ನು ಕೆರೆಗಳ ರೂಪದಲ್ಲಿ ಸಂಗ್ರಹಿಸಿ ಇಟ್ಟುಕೊಂಡಿದ್ದರೆ ವರ್ಷಕ್ಕೆ ಎರಡು ಫಸಲು ಬತ್ತವನ್ನು ಬೆಳೆಯಬಹುದಿತ್ತೆಂದೂ ಬುಕ್ಯಾನನ್ ಅಭಿಪ್ರಾಯ ಪಟ್ಟಿದ್ದಾನೆ.[13]

ಬುಕ್ಯಾನನ್ ಶ್ರೀರಂಗಪಟ್ಟಣದ ಪರಿಸರದಲ್ಲಿ ಬತ್ತವನ್ನು ಬಿತ್ತುವ ನಾನಾ ವಿಧಾನಗಳನ್ನು ವಿವರಿಸಿದ್ದಾನೆ. ಭಾರತದಲ್ಲಿ ಒಟ್ಟು 3 ವಿಧವಾಗಿ ಬತ್ತದ ಬೀಜಗಳನ್ನು ನೆಡುವ ಪದ್ಧತಿ ಇದ್ದಿತು ಎಂದು ತಿಳಿಸುತ್ತಾ ಆ ಪದ್ಧತಿಗಳು ಶ್ರೀರಂಗಪಟ್ಟಣದ ಪ್ರದೇಶದಲ್ಲೂ ರೈತರು ಅನುಸರಿಸುತ್ತಿದ್ದರು ಎಂದು ಹೇಳಿದ್ದಾನೆ. ಮೊದಲನೇ ಕ್ರಮದಲ್ಲಿ ಬತ್ತದ ಬೀಜವನ್ನು ಒಣಗಿದ ರೂಪದಲ್ಲಿ ಕೃಷಿ ಕ್ಷೇತ್ರದಲ್ಲಿ ಬಿತ್ತುತ್ತಿದ್ದರು. ಇದನ್ನು ಬುಕ್ಯಾನನ್ `Dry Seed' ವ್ಯವಸಾಯ ಎಂದು ಕರೆದಿದ್ದಾನೆ. ಶ್ರೀರಂಗಪಟ್ಟಣದಲ್ಲಿ ಈ ಕ್ರಮವನ್ನು 'ಬರಬತ್ತ ಅಥವಾ ಪೊನಜಿ' ಎಂದು ಕರೆಯುತ್ತಿದ್ದರು. 2ನೇಯ ಕ್ರಮದಲ್ಲಿ ಬೀಜವನ್ನು ಮೊಳಕೆ ಬರೆಸಿ ನಂತರ ಭೂಮಿಯನ್ನು ನೆಡುತ್ತಿದ್ದರು. ಅದಕ್ಕಾಗಿ ಗದ್ದೆಯನ್ನು ಕೆಸರು ರೂಪದಲ್ಲಿ ತಯಾರಿಸುತ್ತಿದ್ದರು. ಬುಕ್ಯಾನನ್‌ನು ಶ್ರೀರಂಗಪಟ್ಟಣದಲ್ಲಿದ್ದ ಈ ಪದ್ಧತಿಯನ್ನು "ಮೂಲಬತ್ತಿ" ಎಂದು ಕರೆದಿದ್ದಾನೆ. 3ನೇಯ ಕ್ರಮದಲ್ಲಿ ಒಂದು ಸಣ್ಣ ಜಾಗದಲ್ಲಿ ಅತೀವತ್ತಾಗಿ ಬತ್ತದ ಬೀಜವನ್ನು ನೆಡುತ್ತಿದ್ದರು. ಈ ಬೀಜಗಳು ಒಂದು ಅಡಿಯಷ್ಟು ಮೊಳಕೆ ಹೊಡೆದು ಬೆಳೆದಾಗ ಅವುಗಳನ್ನು ಕಿತ್ತು ಗದ್ದೆಯಲ್ಲಿ ನಾಟಿ ಮಾಡುತ್ತಿದ್ದರು. ಇದನ್ನು ಶ್ರೀರಂಗ ಪಟ್ಟಣದ ಪರಿಸರದಲ್ಲಿ 'ನಾಟಿ ಪದ್ಧತಿ' ಎಂದು ಕರೆಯುತ್ತಿದ್ದರು.[14]

ಬುಕ್ಯಾನನ್‌ನು ಶ್ರೀರಂಗಪಟ್ಟಣದ ಪರಿಸರದಲ್ಲಿ ಬೆಳೆಯುತ್ತಿದ್ದ ಅನೇಕ ವಿಧವಾದ ಬತ್ತದ ಹೆಸರನ್ನು ನೀಡಿದ್ದಾನೆ. ಅಂತಹ 10 ಹೆಸರುಗಳು ಅವನ ಗ್ರಂಥದಲ್ಲಿ ದೊರೆಯುತ್ತವೆ. ಅವುಗಳು ಯಾವುವೆಂದರೆ, (1) ದೊಡ್ಡ ಬತ್ತ (2) ಹೊಟೆಕೆಂಬುತ್ತಿ (3) ಅರಸಿನ ಕೆಂಬುತ್ತಿ (4) ಸುಖದಾಸ್ (5) ಮುರಾರ್‌ಗಿಲ್ಲಿ (6) ಏಲಕ್ಕಿ ರಾಜ (7) ಕೋನವಾಲಿ (8) ಬಿಳಿ ಸಣ್ಣಬತ್ತ (9) ಪುಟ್ಬತ್ತ (10) ಕಾರ್‌ಕುಳ. ಇವುಗಳನ್ನು ಕಾರು ಮತ್ತು ಹೈನು ಪೈರುಗಳಾಗಿ ಬೆಳೆಯುತ್ತಿದ್ದರೆಂದು ಬುಕ್ಯಾನನ್ ತಿಳಿಸಿದ್ದಾನೆ. ಅಲ್ಲದೆ ಅವುಗಳು ಕ್ಯೂಲಿಗೆ ಬರಲು ಬೇಕಾದ ಅವಧಿಯನ್ನು ಸೂಚಿಸಿದ್ದಾನೆ. ಮೇಲಿನ ಪಟ್ಟಿಯಲ್ಲಿ ದೊಡ್ಡ ಬತ್ತವನ್ನು ಬಿಟ್ಟರೆ ಮಿಕ್ಕೆಲ್ಲಾ ಬತ್ತಗಳು 5 1/2 ತಿಂಗಳುಗಳಲ್ಲಿ ಹಣ್ಣಾಗಿ

ಕ್ವ್ಯಾಲಿಗೆ ಸಿದ್ಧವಾಗುತ್ತಿದ್ದವು. ದೊಡ್ಡ ಬತ್ತಕ್ಕೆ ಮಾತ್ರ 7 ತಿಂಗಳು ಬೇಕಾಗುತ್ತಿತ್ತು. ಈ ವಿವರಗಳಲ್ಲದೆ ಬುಕ್ಯಾನನ್‌ನು ಯಾವ ಯಾವ ಕಾಲದಲ್ಲಿ ಬೀಜವನ್ನು ಬಿತ್ತುತ್ತಿದ್ದರು ಎಂಬುದನ್ನು ಸಹ ವಿವರಿಸಿದ್ದಾನೆ. ಉದಾ.ಹೈನು ಬೆಳೆಗಳನ್ನು ಪಾಲ್ಗುಣ, ಚೈತ್ರ, ವೈಶಾಖ ದಿನಗಳಲ್ಲಿ ಬಿತ್ತುತ್ತಿದ್ದರು.[15]

ಬೇರೆ ಬೇರೆ ರೀತಿಗಳಲ್ಲಿ ಬತ್ತವನ್ನು ಬೆಳೆಯುವುದರಿಂದ ರೈತನಿಗೆ ಹೆಚ್ಚು ಅನುಕೂಲವಾಗುತ್ತಿತ್ತು. ಶ್ರಮವನ್ನು ವರ್ಷವಿಡಿ ಉತ್ತಮವಾಗಿ ಬಳಸಿಕೊಳ್ಳಬಹುದಾಗಿತ್ತು. ಕುಡುಗೋಲಿನಿಂದ ಬೆಳೆಯನ್ನು ಕತ್ತರಿಸಿ ರಾಶಿ ಹಾಕುತ್ತಿದ್ದರು. ಒಂದು ರಾಶಿಯಲ್ಲಿ 60 ಖಂಡುಗ ಬತ್ತ ಇರುತ್ತಿತ್ತು. ಬುಕ್ಯಾನನ್ ಪ್ರಕಾರ 60 ಖಂಡುಗ ಬತ್ತವು ಇಂಗ್ಲೀಷ್‌ನ 364 ಬುಷಲ್‌ಗಳಿಗೆ ಸಮವಾಗಿತ್ತು. ಸರ್ಕಾರ ಮತ್ತು ಕೃಷಿಕರು ಗದ್ದೆಯಲ್ಲೇ ತಮ್ಮ ತಮ್ಮ ಪಾಲನ್ನು ಹಂಚಿಕೊಳ್ಳುತ್ತಿದ್ದರು.[16] ಬುಕ್ಯಾನನ್ ಬತ್ತವನ್ನು ಸಂರಕ್ಷಿಸುವ ವಿಧಾನವನ್ನು ವಿವರಿಸಿದ್ದಾನೆ. ಸಿಪ್ಪೆ ಸಮೇತವಾಗಿ ಬತ್ತವನ್ನು ರಕ್ಷಿಸಿ ಇಡುತ್ತಿದ್ದರು. ಕೆಲವರು ಮನೆಯಲ್ಲಿ ದೊಡ್ಡ ದೊಡ್ಡ ಮಣ್ಣಿನ ಜಾಡಿಗಳಲ್ಲಿ ಬತ್ತವನ್ನು ತುಂಬಿ ಇಡುತ್ತಿದ್ದರು. ಮತ್ತೆ ಕೆಲವರು 'ಹಗವು' ಎಂಬ ಗುಂಡಿಗಳಲ್ಲಿ ಸಂರಕ್ಷಿಸುತ್ತಿದ್ದರು. ಇಂತಹ ಹಗವುಗಳನ್ನು ಗಟ್ಟಿಯಾದ ಭೂಮಿಯಲ್ಲಿ ಸಂರಕ್ಷಿಸುತ್ತಿದ್ದರು. ಒಂದು ಹಗವುನಲ್ಲಿ 15-30 ಖಂಡುಗ ಬತ್ತವನ್ನು ಸಂರಕ್ಷಿಸಿ ಇಡಬಹುದಾಗಿತ್ತು. ಕೆಲವರು ಕಣಜವನ್ನು ಕಟ್ಟಿ ಬತ್ತವನ್ನು ಸಂರಕ್ಷಿಸಿ ಇಟ್ಟುಕೊಳ್ಳುತ್ತಿದ್ದರು. ಮತ್ತೆ ಕೆಲವರು ಹುಲ್ಲಿನ ಚೀಲಗಳಲ್ಲಿ ಬತ್ತವನ್ನು ಇಡುತ್ತಿದ್ದರು. ಹೀಗೆ ಬತ್ತವನ್ನು 2 ರಿಂದ 4 ವರ್ಷಗಳ ಕಾಲ ಇಡುತ್ತಿದ್ದರೆಂದು ಬುಕ್ಯಾನನ್ ತಿಳಿಸಿದ್ದಾನೆ. ಈ ಅವಧಿಯ ನಂತರ ಬತ್ತವು ಆಳಾಗುತ್ತಿತ್ತು.[17]

ಬತ್ತದಿಂದ ಅಕ್ಕಿಯನ್ನು 2 ರೀತಿ ತಯಾರಿಸುತ್ತಿದ್ದರು. ಒಂದು ಪದ್ಧತಿಯ ಪ್ರಕಾರ ಮೊದಲು ಬೇಯಿಸಿ ನಂತರ ಒಟ್ಟನ್ನು ತೆಗೆದು ಅಕ್ಕಿ ತಯಾರಿಸುತ್ತಿದ್ದರು. ಮತ್ತೊಂದು ಕ್ರಮದ ಪ್ರಕಾರ ಬತ್ತವನ್ನು ಕುಟ್ಟಿ ಅಕ್ಕಿ ತಯಾರಿಸುವುದಾಗಿತ್ತು. ರಾಜರು ಮತ್ತು ಶ್ರೀಮಂತ ವರ್ಗದವರು ಮೊದಲ ರೀತಿಯಲ್ಲಿ ತಯಾರಿಸಿದ ಅಕ್ಕಿಯನ್ನು ಉಪಯೋಗಿಸುತ್ತಿದ್ದರು. ಶೂದ್ರ ಜನಾಂಗದವರು ಕುಡಪಾಲ್ ಅಕ್ಕಿಯನ್ನು ಉಪಯೋಗಿಸುತ್ತಿದ್ದರು. ಅಂದರೆ ಮಡಿಕೆಯಲ್ಲಿ ಬೇಯಿಸಿದ ಅಕ್ಕಿಯನ್ನು ಉಪಯೋಗಿಸುತ್ತಿದ್ದರು. ಬ್ರಾಹ್ಮಣರು ಬೇಯಿಸದೆ ಇದ್ದ 'ಹಸಿ' ಅಕ್ಕಿಯನ್ನು ಉಪಯೋಗಿಸುತ್ತಿದ್ದರು. ಬತ್ತವನ್ನು ಕುಟ್ಟಿ ಅಕ್ಕಿಯನ್ನು ತಯಾರಿಸಲು ಯಾತ (ಒನಕೆ) ವನ್ನು ಉಪಯೋಗಿಸುತ್ತಿದ್ದರು. ಸ್ತ್ರೀಯರು ಈ ಕೆಲಸವನ್ನು ಮಾಡುತ್ತಿದ್ದರು.[18]

ಶ್ರೀರಂಗಪಟ್ಟಣದ ಪ್ರದೇಶದಲ್ಲಿ ಚಿಕ್ಕ ಉದ್ದು ಮತ್ತು ದೊಡ್ಡ ಉದ್ದು ಎಂಬ 2 ರೀತಿಯ 'ಉದ್ದ'ನ್ನು ಬೆಳೆಯುತ್ತಿದ್ದರು. 'ಹೆಸರು'ನ್ನು ಸಹ ಹೈನು ಮತ್ತು ಕಾರು ಬೆಳೆಯಾಗಿ ಬೆಳೆಯುತ್ತಿದ್ದರು. ಉದ್ದಿನ ಗಿಡದ ಹುಲ್ಲನ್ನಾಗಲಿ ಅಥವಾ ಹೆಸರಿನ ಗಿಡದ ಹುಲ್ಲನ್ನಾಗಲಿ ಪಶು ಆಹಾರವಾಗಿ ಉಪಯೋಗಿಸುತ್ತಿರಲಿಲ್ಲ. ಬಿಳಿ ಮತ್ತು ಕರಿ 'ತಡುಗುಣಿ'ಯನ್ನು ಬೆಳೆಯುತ್ತಿದ್ದರು. ಈ ಪ್ರದೇಶದಲ್ಲಿ ಬೆಳೆಯುತ್ತಿದ್ದ ಎಳ್ಳಿಗೆ 'ಪಾಲ್ಗುಣ ಎಳ್ಳು' ಎಂದು ಕರೆಯುತ್ತಿದ್ದರು. ಎಳ್ಳನ್ನು ಬೆಲ್ಲಕ್ಕೆ ಸೇರಿಸಿ ಅನೇಕ ರೀತಿಯ ಸಿಹಿತಿಂಡಿಗಳನ್ನು ತಯಾರಿಸುತ್ತದ್ದರು.[19]

ಶ್ರೀರಂಗಪಟ್ಟಣದ ಪರಿಸರದಲ್ಲಿ 'ರಸತಾಳಿ ಮತ್ತು ಪುಟ್ಟಪಟ್ಟಿ' ಎಂಬ ಎರಡು ರೀತಿಯ ಕಬ್ಬನ್ನು ಹೇರಳವಾಗಿ ಬೆಳೆಯುತ್ತಿದ್ದರು. ಎರಡು ಜಾತಿಯ ಕಬ್ಬಿನಿಂದ ಬೆಲ್ಲವನ್ನು ತಯಾರಿಸ ಬಹುದಾಗಿತ್ತು. ಆದರೆ ಶ್ರೀರಂಗಪಟ್ಟಣದ ರೈತರು 2ನೇ ವರ್ಗದ ಕಬ್ಬಿನಿಂದ ಮಾತ್ರ ಬೆಲ್ಲವನ್ನು ತಯಾರಿಸುತ್ತಿದ್ದರು. ಚೈತ್ರಮಾಸದಲ್ಲಿ ರಸತಾಳಿ ಕಬ್ಬನ್ನು, ಶ್ರಾವಣ ಅಥವಾ ಮಾಘ ಮಾಸದಲ್ಲಿ ಪುಟ್ಟಪಟ್ಟಿ ಕಬ್ಬನ್ನು ಬೆಳೆಯುತ್ತಿದ್ದರು. ರಸತಾಳಿ ಕಬ್ಬನ್ನು ಬೆಳೆಯಲು ಒಂದು ವರ್ಷ ಬೇಕಾದರೆ ಪುಟ್ಟಪಟ್ಟಿ ಕಬ್ಬಿಗೆ 14 ತಿಂಗಳುಗಳು ಬೇಕಾಗುತ್ತಿತ್ತು.[20]

ಕಬ್ಬನ್ನು ಬೆಳೆಯುವ ಕ್ರಮವನ್ನು ಬುಕ್ಯಾನನ್ ವಿವರಿಸಿದ್ದಾನೆ. ಬೆಲ್ಲವನ್ನು ತಯಾರಿಸಲು ಆಲೆ ಮನೆಯನ್ನು ಸ್ಥಾಪಿಸಿ ಅಲ್ಲಿ ಗಾಣದ ಮೂಲಕ ಕಬ್ಬನ್ನು ಅರೆದು ರಸವನ್ನು ತೆಗೆಯುತ್ತಿದ್ದರು. ಕೊಪ್ಪರಿಗೆಯಲ್ಲಿ ಕಬ್ಬಿನ ರಸವನ್ನು ಕಾಯಿಸಿ ಬೆಲ್ಲವನ್ನು ತಯಾರಿಸುತ್ತಿದ್ದರು. ಬೆಲ್ಲವನ್ನು ತಯಾರಿಸುವಲ್ಲಿ ಉಪಯೋಗಿಸುವ ಪರಿಕರಗಳನ್ನು ಅವನು ವಿವರಿಸಿದ್ದನೆ.[21] ಶ್ರೀರಂಗಪಟ್ಟಣದಲ್ಲಿ ಗೌಡ, ಅಮಲ್ದಾರ್ ಮತ್ತು ಶಿರಸ್ತೆದಾರ್ ಮೊದಲಾದವರನ್ನು ಸಂಪರ್ಕಿಸಿ ನೀರಾವರಿ ಭೂಮಿಯಲ್ಲಿ 1 ಎಕರೆಗೆ ಸರಾಸರಿ ಎಷ್ಟು ಉತ್ಪನ್ನವನ್ನು ತೆಗೆಯಬಹುದಾಗಿತ್ತು ಎಂಬುದನ್ನು ಬುಕ್ಯಾನನ್ ಲೆಕ್ಕಾಚಾರ ಮಾಡಿಕೊಟ್ಟಿದ್ದಾನೆ.[22] ಖುಷ್ಕಿ ಭೂಮಿಯಲ್ಲಿ ಬೆಳೆಯುತ್ತಿದ್ದ ಬೆಳೆಗಳಲ್ಲಿ ಅತ್ಯಂತ ಪ್ರಮುಖವಾದ ಬೆಳೆ 'ರಾಗಿ'ಯಾಗಿತ್ತು. ಸಮಾಜದ ಕೆಳವರ್ಗದ ಜನರು ರಾಗಿಯನ್ನು ತಮ್ಮ ದಿನನಿತ್ಯದ ಆಹಾರವಾಗಿ ಉಪಯೋಗಿಸುತ್ತಿದ್ದರು. ಶ್ರಮಜೀವಿಗಳಿಗೆ ಇದು ಪುಷ್ಟಿಯಾದ ಆಹಾರ ವಾಗಿತ್ತೆಂದು ಬುಕ್ಯಾನನ್ ಬರೆದಿದ್ದಾನೆ. ರಾಗಿ ಅತ್ಯಂತ ಕಡಿಮೆ ಬೆಲೆಯ ಧಾನ್ಯವಾಗಿತ್ತು ಕುಡಗೋಲಿ ನಿಂದ ರಾಗಿಯನ್ನು ಕ್ಯುಯಿಲು ಮಾಡುತ್ತಿದ್ದರು. ಬೀಸುವ ಕಲ್ಲಿನಿಂದ ರಾಗಿಯನ್ನು ಹಿಟ್ಟಾಗಿ ಪರಿವರ್ತಿಸಿ ರೊಟ್ಟಿ, ದೋಸೆ ಮತ್ತು ಮುದ್ದೆಗಳ ರೂಪದಲ್ಲಿ ತಿನ್ನುತ್ತಿದ್ದರು. ರಾಗಿಯ ಹುಲ್ಲನ್ನು

ದನಗಳಿಗೆ ಮೇವಾಗಿ ಕೊಡುತ್ತಿದ್ದರು ಮತ್ತು ಇದು ಅತ್ಯಂತ ಪುಷ್ಟಿಯಾದ ಮೇವೆಂದು ಜನ ಭಾವಿಸಿದ್ದರು. ಕಪ್ಪು ಮಣ್ಣಿನ ಭೂಮಿ ರಾಗಿಗೆ ಯೋಗ್ಯವಾಗಿತ್ತು.[23]

ಐರೆ ಭೂಮಿಯಲ್ಲಿ ಅವರೆ, ತೊಗರಿ ಮತ್ತು ಜೋಳವನ್ನು ಬೆಳೆಯುತ್ತಿದ್ದರು. ಇವೆಲ್ಲ ಖುಷ್ಕಿ ಬೆಳೆಗಳಾಗಿದ್ದವು. ಜೋಳ ಅತ್ಯಂತ ವ್ಯಾಪಕವಾದ ಬೆಳೆಯಾಗಿತ್ತು. ಇದಕ್ಕೆ ರಾಗಿಯಷ್ಟು ಮಳೆ ನೀರಿನ ಅವಶ್ಯಕತೆ ಬೇಕಾಗಿರಲಿಲ್ಲ. ಹುರಳಿ ಬೆಳೆದ ನಂತರವು ಇದನ್ನು ಬೆಳೆಯುತ್ತಿದ್ದರು.[24]

ಬುಕ್ಯಾನನ್ ಹೆಸರಿಸಿರುವ ಇತರ ಖುಷ್ಕಿ ಧಾನ್ಯಗಳೆಂದರೆ, ಕಮ್ಮು, ಸಾಮೆ, ಹಾರಿಕ, ನವಣೆ, ಹುರುಳಿ ಮತ್ತು ಹರಳು. ಇವುಗಳನ್ನು ಬೆಳೆಯುವ ಕ್ರಮಗಳನ್ನು ಸಹ ವಿವರಿಸಿದ್ದಾನೆ. ಅವುಗಳು ಹೆಚ್ಚಿನ ಮಟ್ಟಿಗೆ ಇಂದಿನ ರೂಪದಲ್ಲೇ ಇವೆ. ಹರಳಿನಿಂದ ಎಣ್ಣೆಯನ್ನು ತಯಾರಿಸುತ್ತಿದ್ದರು. ರೈತ ವರ್ಗದವರು ಇದನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದರು. ಶೂದ್ರ ಜನಾಂಗದವರು ಹರಳೆ ಎಣ್ಣೆಯನ್ನು ತಲೆಗೆ ಅಟ್ಟಿಕೊಳ್ಳುತ್ತಿದ್ದರು.[25]

ಶ್ರೀರಂಗಪಟ್ಟಣದ ಸುತ್ತಮುತ್ತ ಬುಕ್ಯಾನನ್ ನಾಲ್ಕು ರೀತಿಯ ತೋಟಗಳನ್ನು ಗುರ್ತಿಸಿದ್ದಾನೆ. (1) ತರಕಾರಿತೋಟ (2) ತೆಂಗಿನತೋಟ. ಇದರ ಜೊತೆಗೆ ಕೆಲವು ಹಣ್ಣುಗಳನ್ನು ಬೆಳೆಯುತ್ತಿದ್ದರು. (3) ಎಲೆತೋಟ (4) ಹೂವಿನತೋಟ. ತರಕಾರಿತೋಟ ಮತ್ತು ತೆಂಗಿನತೋಟಗಳನ್ನು ಶ್ರೀರಂಗ ಪಟ್ಟಣದ ಪರಿಸರದಲ್ಲಿ ಯಾವಾಗಲೂ ರೈತರು ಬೆಳೆಸುತ್ತಿದ್ದರು. ಆದರೆ ಒಂದು ವಿಶಿಷ್ಟ ವರ್ಗದ ಜನರು, ಎಲೆತೋಟವನ್ನು ಸಾತಾನಿಗಳೆಂಬುವವರು ಹೂವಿನತೋಟಗಳನ್ನು ಬೆಳೆಸುತ್ತಿದ್ದರು. ಬದನೆ, ಹೀರೆ, ಕುಂಬಳ, ಬೂದುಗುಂಬಳ, ಸೋರೆ, ಪಡವಲ, ಹಾಗಲ, ಚಿಕ್ಕಹಾಗಲ, ಬೆಂಡೆ, ಗೋರಿ ಮೊದಲಾದವು ಮುಖ್ಯವಾದ ತರಕಾರಿಗಳಾಗಿದ್ದವು. ಇವಲ್ಲದೆ ಮೂಲಂಗಿ, ಬೆಳ್ಳುಳ್ಳಿ, ಹರಿಸಿನ, ಶುಂಠಿ, ಗೆಣಸು, ಸೊಪ್ಪು, ಕೆಸುವು ದಂಟು, ಬಸಳೆ, ಮೆಂತ್ಯಾ, ಮೆಣಸಿನಕಾಯಿ ಮೊದಲಾದವು ಗಳನ್ನು ಹೆಸರಿಸಿದ್ದಾನೆ.[26]

ತೋಟಗಳಲ್ಲಿ ಬೆಳೆಯುತ್ತಿದ್ದ ಫಸಲುಗಳು ಇಂತಿದ್ದವು. ತೆಂಗು, ಅಡಿಕೆ, ಬಾಳೆ, ನಿಂಬೆ, ಸೇಬು, ದಾಳಿಂಬೆ, ಹಲಸು, ಮಾವು, ನೇರಳೆ, ನೆಲ್ಲಿ, ಹುಣಸೆ ಮುಂತಾದವು. ಶ್ರೀರಂಗಪಟ್ಟಣದ ಬಳಿ ಹೆಚ್ಚಾಗಿ ಎಲೆತೋಟಗಳು ಇರಲಿಲ್ಲವೆಂದು ಬುಕ್ಯಾನನ್ ಬರೆದಿದ್ದಾನೆ. ಎಲೆ ಬಳ್ಳಿಗಳನ್ನು

ಬತ್ತಿದ ಭೂಮಿಯಲ್ಲೇ ಬೆಳೆಸುತ್ತಿದ್ದರು. ಇವಲ್ಲದೆ ಕಾಲುವೆ ಮತ್ತು ನದಿಯ ಮರಳಿನ ಪ್ರದೇಶದಲ್ಲಿ ಕರಬೂಜ ಮತ್ತು ಕಲ್ಲಂಗಡಿ ಹಣ್ಣುಗಳನ್ನು ಬೆಳೆಯುತ್ತಿದ್ದರು. ಒಟ್ಟಿನಲ್ಲಿ ಶ್ರೀರಂಗಪಟ್ಟಣದ ಪರಿಸರ ಕೃಷಿ ದೃಷ್ಟಿಯಿಂದ ವೈವಿಧ್ಯಮಯವಾಗಿ ಸಂಮೃದ್ಧಿಯಾಗಿತ್ತೆಂದು ಬುಕ್ಯಾನನ್‌ನ ಪ್ರವಾಸ ಗ್ರಂಥದಿಂದ ಸ್ಪಷ್ಟವಾಗುತ್ತದೆ.[27]

ಕೃಷಿಗೆ ಆಧಾರವಾದದ್ದು ಪಶುಸಂಪತ್ತು. ಶ್ರೀರಂಗಪಟ್ಟಣದ ಪರಿಸರದಲ್ಲಿ ಗೋವುಗಳು, ಎಮ್ಮೆ, ಕುರಿ, ಉದ್ದನೆ ಕಾಲಿನ ಆಡು ಮತ್ತು ಕತ್ತೆಗಳನ್ನು ಮುಖ್ಯವಾಗಿ ಸಾಕುತ್ತಿದ್ದರು. ಆದರೆ ಕುದುರೆಗಳು, ಹಂದಿ ಮತ್ತು ಸಾಮಾನ್ಯ ಆಡು ಹೆಚ್ಚಿನ ಸಂಖ್ಯೆಯಲ್ಲಿ ಕಾಣುತ್ತಿರಲಿಲ್ಲ. ಒಂಟೆಯನ್ನು ತುಂಬಾ ದೂರದ ಪ್ರದೇಶಗಳಿಂದ ಶ್ರೀರಂಗಪಟ್ಟಣಕ್ಕೆ ತರುತ್ತಿದ್ದರು. ವ್ಯವಸಾಯದ ಎತ್ತುಗಳನ್ನು ಇಲ್ಲೇ ತಳಿಹಾಕಿ ರೈತರು ಬಳಸುತ್ತಿದ್ದರು. ಆದರೆ ಗಾಡಿ ಎತ್ತುಗಳನ್ನು ಆಲಂಬಾಡಿ, ತಿರುಪತ್ತೂರು, ಕಾವಡಹಳ್ಳಿ, ಕನಕನಹಳ್ಳಿ, ರಾಮಗಿರಿ ಮೊದಲಾದ ಕಡೆಗಳಿಂದ ಆಮದು ಮಾಡಿಕೊಳ್ಳುತ್ತಿದ್ದರು. ಗೌಳಿಗ ಎಂಬ ಶೂದ್ರ ಜನಾಂಗದವರು ಎಮ್ಮೆಗಳನ್ನು ಶ್ರೀರಂಗಪಟ್ಟಣದ ಬಳಿ ಸಾಕಿ ಹಾಲನ್ನು ಮಾರುತ್ತಿದ್ದರು. ಕುರುಬರು ಕುರಿಗಳನ್ನು ಸಾಕುತ್ತಿದ್ದರು. ಮೊದಲು ಹಂದಿಗಳು ಸಾಮಾನ್ಯವಾಗಿದ್ದವು. ಆದರೆ ಟಿಪ್ಪು ಅವುಗಳನ್ನು ಶ್ರೀರಂಗಪಟ್ಟಣದ ಪರಿಸರದಿಂದ ದೂರವಿರಿಸಿದನು. ದೇಶೀಯ ತಳಿ ಕುದುರೆಗಳು ಹೆಚ್ಚಾಗಿರಲಿಲ್ಲ ಮತ್ತು ಸಾಕಷ್ಟು ದಷ್ಟಪುಷ್ಟವಾಗಿರಲಿಲ್ಲ. ಹೈದರ್ ಮತ್ತು ಟಿಪ್ಪುಸುಲ್ತಾನರು ಕುದುರೆ ತಳಿಗಳನ್ನು ಉತ್ತಮಪಡಿಸಲು ಪ್ರಯತ್ನಿಸಿದರು.[28]

ಗ್ರಾಮಗಳನ್ನು 3 ವರ್ಗಗಳಾಗಿ ವಿಂಗಡಿಸುತ್ತಿದ್ದರು. (1) ಅಗ್ರಹಾರ (2) ಮಾನ್ಯಗ್ರಾಮ (3) ಕರಗ್ರಾಮ.[29] ಅಗ್ರಹಾರವೆಂದರೆ ಬ್ರಾಹ್ಮಣರಿಗಾಗಿ ವಿಜಯನಗರದ ಅರಸರು ಮತ್ತು ಮೈಸೂರಿನ ಒಡೆಯರು ತೆರಿಗೆ ರಹಿತವಾಗಿ ಕೊಟ್ಟ ಗ್ರಾಮವಾಗಿದ್ದವು. ಸರ್ಕಾರಕ್ಕೆ ವಿವಿಧ ರೀತಿಯ ಸೇವೆಗಳನ್ನು ಸಲ್ಲಿಸುವುದಕ್ಕಾಗಿ ನೀಡಿದ ಗ್ರಾಮಗಳನ್ನು ಮಾನ್ಯ ಗ್ರಾಮವೆಂದು ಕರೆಯುತ್ತಿದ್ದರು. ಸರ್ಕಾರವು ಹಾಕಿದ್ದ ತೆರಿಗೆಗಳನ್ನು ನೀಡುವ ಗ್ರಾಮಗಳನ್ನು ಕರಗ್ರಾಮಗಳೆಂದು ಕರೆಯುತ್ತಿದ್ದರು.

ವಿಜಯನಗರದ ಅರಸರ ಕಾಲದಿಂದಲೂ ಶ್ರೀರಂಗಪಟ್ಟಣದ ಪ್ರದೇಶದಲ್ಲಿ ಬ್ರಹ್ಮದಾಯ ಮತ್ತು ದೇವದಾಯಗಳು ಆಳುವ ವರ್ಗದಿಂದ ಸೃಷ್ಟಿಸಲ್ಪಟ್ಟವು. ಇದಕ್ಕೆ ಕೆಲವು ಉದಾಹರಣೆಗಳನ್ನು ನೀಡಬಹುದು.

## ಅಗ್ರಹಾರ

ಗ್ರಾಮಗಳನ್ನು ಅಗ್ರಹಾರಗಳಾಗಿ ಪರಿವರ್ತಿಸುವ ಕ್ರಮ ವಿಜಯನಗರ ಕಾಲದಲ್ಲಿ ಈ ಪ್ರದೇಶದಲ್ಲಿ ಆಚರಣೆಯಲ್ಲಿದ್ದಿತು. ಇದಕ್ಕೆ ಉದಾಹರಣೆಯಾಗಿ, ಸಂಗಮ ವಂಶದ 2ನೇ ದೇವ ರಾಯನ ಕಾಲದ ಶಾಸನವನ್ನು ನೀಡಬಹುದು. ಅವನು ಬ್ರಾಹ್ಮಣರಿಗೆ 'ಚೆಂದಿಗಾಲ' ಎಂಬ ಗ್ರಾಮ ವನ್ನು ದಾನವಾಗಿ ಕೊಟ್ಟನು. ಇದು 1430ರಲ್ಲಿ ಮೇನಾಪುರ ಮಾಗಣಿಯ ತೋರಿನಾಡ ವೆಂಟೇ ಯಲ್ಲಿದ್ದಿತು. ಈ ಗ್ರಾಮವನ್ನು ಅಗ್ರಹಾರವಾಗಿ ಪರಿವರ್ತಿಸಿದಾಗ ಅದಕ್ಕೆ 'ಪ್ರತಾಪ ದೇವರಾಯಪುರ' ಎಂಬ ಹೆಸರನ್ನು ನೀಡಲಾಯಿತು. ಇದನ್ನು ಅನೇಕ ವೃತ್ತಿಗಳಾಗಿ ವಿಂಗಡಿಸಿ ವಿದ್ವಾಂಸರಾದ ಬ್ರಾಹ್ಮಣರಿಗೆ ನೀಡಲಾಯಿತು. ಅಗ್ರಹಾರದ ಗಡಿಯನ್ನು ಶಾಸನದಲ್ಲಿ ಗುರ್ತಿಸಲಾಗಿದೆ. ಅಗ್ರಹಾರದ ವೃತ್ತಿದಾರರನ್ನು 'ಮಹಾಜನ' ರೆಂದು ಶಾಸನದಲ್ಲಿ ಕರೆಯಲಾಗಿದೆ. ಹೀಗೆ ಅಂದಿನ ಕೃಷಿ ವ್ಯವಸ್ಥೆ ಯಲ್ಲಿ ಹಳ್ಳಿಯೊಂದನ್ನು ಪರಿವರ್ತಿಸುವ ಸಂಪ್ರದಾಯವಿದ್ದಿತು.[30]

ಮಲ್ಲಿಕಾರ್ಜುನನು ಸ್ಥಾಪಿಸಿದ ಅಗ್ರಹಾರದ ವಿವರ ಶ್ರೀರಂಗಪಟ್ಟಣದ ದೇವಸ್ಥಾನದಲ್ಲಿರುವ ತಾಮ್ರ ಶಾಸನದಿಂದ ತಿಳಿದು ಬರುತ್ತದೆ. ಬ್ರಾಹ್ಮಣರಿಗೆ ನೀಡಿದ ಹಳ್ಳಿಯ ಹೆಸರು 'ಹಾಗಲಹಳ್ಳಿ' ಅದು ಮಧುನಾಡಿನಲ್ಲಿ ಇದ್ದಿತು. ಮದುನಾಡು ಕನ್ನಂಬಾಡಿ ಸ್ಥಳದಲ್ಲಿ ಇದ್ದಿತು. ಕನ್ನಂಬಾಡಿ ಸ್ಥಳವು ಹೊಯ್ಸಳ (ಹೊಸಳ) ದೇಶದಲ್ಲಿ ಇದ್ದಿತು.[31]

## ಸರ್ವಮಾನ್ಯ ಅಗ್ರಹಾರ

ಕನ್ನಂಬಾಡಿಯ ಸ್ಥಳದ ಮದುನಾಡ ಒಳಗೂ ಹಾಗಲ ಹಳ್ಳಿ ಗ್ರಾಮವನ್ನು ನಾಗದೇವ ಭಟ್ಟರ ಮಕ್ಕಾಳು ದೇವರು ಭಟ್ಟರಿಗೆ ಧಾರಾಪೂರ್ವಕವಾಗಿ ಸರ್ವಮಾನ್ಯದ ಅಗ್ರಹಾರವಾಗಿ ಕೊಟ್ಟದ್ದು.

ವಿಜಯನಗರ ಕಾಲದ ಸಂಪ್ರದಾಯವನ್ನು ಅನುಸರಿಸಿ ಮೈಸೂರಿನ ಒಡೆಯರು ಗ್ರಾಮ ಗಳನ್ನು ಮತ್ತು ಭೂಹಿಡುವಳಿಗಳನ್ನು ಬ್ರಹ್ಮಾದಾಯ ಮತ್ತು ದೇವದಾಯಗಳಾಗಿ ಮಾರ್ಪಡಿಸು ತ್ತಿದ್ದರು. ಇದಕ್ಕೆ ಸಂಬಂಧಿಸಿದಂತೆ ಅನೇಕ ವಿವರಗಳು 'ಶ್ರೀ ಮನ್ಮಹಾರಾಜರವರ ವಂಶಾವಳಿ' ಎಂಬ ಗ್ರಂಥದಲ್ಲಿ ದೊರಕುತ್ತದೆ. ಆ ವಿವರಗಳನ್ನು ಇಲ್ಲಿ ನೀಡಬಹುದು.

## ಚಾಮರಾಜ ಒಡೆಯರವರು ಸ್ಥಾಪಿಸಿದ ಬ್ರಹ್ಮಾದಾಯ ಮತ್ತು ದೇವಾದಾಯಗಳು

ರಾಜ ಒಡೆಯರವರ ಮೊಮ್ಮಕ್ಕಳು ಚಾಮರಾಜ ಒಡೆಯರವರು ತಾವು ಸಾಧಿಸಿದ ಬೆಳ್ಳೂರು, ನಾಗಮಂಗಲ ಮುಂತಾದ ಗಡಿಗಳನ್ನು ಬಂದೋಬಸ್ತು ಮಾಡಬೇಕೆಂದು ಹೇಳಿ ಬರುವ ಮಾರ್ಗದಲ್ಲಿ ಶ್ರವಣಬೆಳಗೊಳದ ಜಿನದೇವರ ದರ್ಶನಕ್ಕೆ ಚಿತ್ತೈಯಿಸಬೇಕೆಂದು ನಿಯೋಗಿ ಬೊಮ್ಮರಸಯ್ಯನು ಭಿನ್ನವಿಸಿಕೊಳ್ಳಲಾಗಿ, ದಾಕ್ಷಿಣ್ಯದಿಂದ ಅಲ್ಲಿಗೆ ದಯಮಾಡಿ ದೇವರ ದರ್ಶನ ಮಾಡಿಕೊಂಡು ಶ್ರೀರಂಗಪಟ್ಟಣಕ್ಕೆ ಬಂದರು. ಅನಂತರ ಪ್ರಜೋತ್ಪತ್ತಿ ಸಂವತ್ಸರದ ಕಾರ್ತಿಕ ಶುದ್ಧ 15 ಸೋಮವಾರ ಸೋಮೋಪರಾಗ ಪುಣ್ಯಕಾಲದಲ್ಲಿ ತಮ್ಮ ಹಿರಿಯರಿಗೆ ಶಾಶ್ವತ ಪುಣ್ಯಲೋಕ ಬರಬೇಕೆಂಬುದಾಗಿಯೂ, ತಮ್ಮ ಪಾಪ ಪರಿಹಾರಾರ್ಥವಾಗಿಯೂ, ನಾಗಮಂಗಲದ ಬಾಚಹಳ್ಳಿ ಹೋಬಳಿಗೆ ಸೇರುವ ಅಘಲಯವೆಂಬ ಪ್ರತಿನಾಮಧೇಯವುಳ್ಳ 'ಚಾಮರಾಜ ಸಮುದ್ರ' ವೆಂಬ ಅಗ್ರಹಾರದಲ್ಲಿ 32 ಮನೆಗಳನ್ನು ಕಟ್ಟಿಸಿ ತ್ರಿಮತಸ್ಥ ಬ್ರಾಹ್ಮಣರುಗಳಿಗೂ ಕೊಟ್ಟುದಲ್ಲದೆ, ನಾರಾಯಣ ಪುರ, ಬಿಳಿಕೆರೆ, ಚಟ್ಟನಹಳ್ಳಿ, ಸಿಂಗನಹಳ್ಳಿ ಕೊಪ್ಪಲು, ಸಿಂಗಾಪುರ, ಕಾಮಂಡಹಳ್ಳಿ, ಕೊಪ್ಪಲು ಸಹ ದೊಡ್ಡ ಸೋಮನಹಳ್ಳಿ, ಕೆರೆಕಟ್ಟೆ ಈ ಗ್ರಾಮಗಳ ಎಲ್ಲೆಗಳಿಗೆ ಶಿಲಾ ಪ್ರತಿಷ್ಟೆಯನ್ನು ಮಾಡಿಸಿ ಹಿರಣ್ಯೋದಕಧಾರಾ ಪೂರ್ವಕವಾಗಿ ಕೊಟ್ಟು ಪುತ್ರಪೌತ್ರ ಪಾರಂಪರ್ಯವಾಗಿ ಅನುಭವಿಸಿಕೊಂಡು ಬರುವಂತೆ ಶಾಸನವನ್ನು ಬರೆದುಕೊಟ್ಟರು. ಶ್ರೀಮುಖ ಸಂವತ್ಸರದಲ್ಲಿ ಚಾಮರಾಜ ಒಡೆಯರವರ ಧರ್ಮಪತ್ನಿ ಮುದ್ದಾಜಮ್ಮಣ್ಣಿಯವರು "ಯಾದವಾದ್ರಿಯಲ್ಲಿರುವ ಯೋಗನೃಸಿಂಹಸ್ವಾಮಿ ಚಲುವ ರಾಯಸ್ವಾಮಿಯವರ ವಯಿರಮುಡಿ ಬ್ರಹ್ಮೋತ್ಸವ ಮುಂತಾದ ಉತ್ಸವಗಳ ದರ್ಶನಕ್ಕಾಗಿ ನಾನಾ ದೇಶಗಳಿಂದ ಬರುವ ಜನಗಳಿಗೆ ಕಲ್ಯಾಣೀ ತೀರ್ಥದಲ್ಲಿ ಸ್ನಾನ ಮಾಡುವುದಕ್ಕೆ ಸೋಪಾನವಿಲ್ಲುದು ದರಿಂದ ಬಹಳ ಶ್ರಮವಾಗಿದೆ ಎಂಬುದು ಚಿತ್ತಕ್ಕೆ ತೋರಿಯೇ ಇದೆ. ಆ ಕಲ್ಯಾಣಿಗೆ ಕಾಶಿಯ ಕೆಲಸದ ಸೋಪಾನವನ್ನು ಕಟ್ಟಿಸಬೇಕು" ಎಂದು ಭೀನ್ನವಿಸಿಕೊಂಡಂತೆ ದೊರೆಗಳವರು ತಮ್ಮ ಧರ್ಮಪತ್ನಿ ಮುದ್ದಾಜಮ್ಮಣ್ಣಿಯವರ ಹೆಸರಿನಿಂದಲೇ ಕಲ್ಯಾಣಿಗೆ ಸೋಪಾನವನ್ನು ಕಟ್ಟಿಸಿದರು.

ಭಾವ ಸಂವತ್ಸರದ ಮಾಘಶುದ್ಧ 15 ಗುರುವಾರದಲ್ಲಿ ಮೈಸೂರು ಬೆಟ್ಟದ ಚಾಮರಾಜ ಒಡೆಯರವರ ಕುಮಾರರಾದ ದಳವಾಯಿ ವಿಕ್ರಮರಾಯರು ನಂಜನಗೂಡು ಶ್ರೀಕಂಠೇಶ್ವರ ಸ್ವಾಮಿ ಯವರಿಗೆ ಸಂಕ್ರಾಂತಿ ಮುಂತಾದ ಸಮಯದ ಉತ್ಸವಗಳು ನಡೆಯುವುದಕ್ಕೆ ಕಪಿಲಾನದಿ ತೀರದಲ್ಲಿ ಮಂಟಪವನ್ನು ಅನೇಕ ವೃಕ್ಷಗಳಿಂದ ನಿಬಿಡವಾದ ವನವನ್ನು ಮಾಡಿಸಿದುದಲ್ಲದೆ ಆ ದೇವಸ್ಥಾನದ

ಹೊರ ಪ್ರಕಾರದಲ್ಲಿ ಸರ್ವ ಜನರು ಆಶ್ಚರ್ಯಪಡುವಂತೆ ಶಿಲೆಯಿಂದ ಒಂದು ದೊಡ್ಡ ವೃಷಭವನ್ನು ಮಾಡಿಸಿ ಅದರ ಪೀಠದಲ್ಲಿ ಸ್ವನಾಮಾಂಕಿತವಾದ ಶಾಸನವನ್ನು ಪ್ರತಿಷ್ಠೆ ಮಾಡಿಸಿದರು.[32]

## ಕಂಠೀರವ ನರಸರಾಜ ಒಡೆಯರವರು ಸ್ಥಾಪಿಸಿದ ಬ್ರಹ್ಮಾದಾಯ ಮತ್ತು ದೇವದಾಯಗಳು

ಕಂಠೀರವ ನರಸರಾಜ ಒಡೆಯವರು ಶ್ರೀರಂಗಪಟ್ಟಣದ ಅರಮನೆಯ ಬಲಭಾಗದಲ್ಲಿ ರಂಗ ಸ್ವಾಮಿಯ ಗುಡಿಯಂತೆ ನೂತನವಾಗಿ ಗುಡಿಗೋಪುರ ಕೈಸಾಲೆ, ಕಲ್ಯಾಣಮಂಟಪ, ಯೋಗಶಾಲೆ, ವಸಂತಕೊಳ ಮುಂತಾದವುಗಳನ್ನು ಕಟ್ಟಿಸಿ, ತಾವು ನರಸಿಂಹ ಜಯಂತಿ ದಿವಸ ಜನಿಸಿದವರಾದ ಕಾರಣ, ಅಮ್ಮನವರು ಸಹಿತವಾಗಿ ನೃಸಿಂಹಸ್ವಾಮಿಯವರನ್ನು ಉಭಯನಾಚ್ಚಿಯಾರು ಸಹಿತವಾಗಿ ಉತ್ಸವ ವಿಗ್ರಹ ಮುಂತಾದ ಪಂಚಬೇಧಗಳನ್ನೂ, ಅನಂತ, ಗರುಡ, ವಿಷ್ವಕ್ಸೇನ, ಆಳ್ವಾರು ಮೊದಲಾದ ಪರಿವಾರ ದೇವರುಗಳನ್ನೂ, ನೂತನವಾಗಿ ಪಾಂಚರಾತ್ರಾದ್ಯಾಗಮೋಕ್ತ ಪ್ರಕಾರವಾಗಿ ಅಲ್ಲಿ ಪ್ರತಿಷ್ಠೆಯನ್ನು ಮಾಡಿಸಿ, ದೇವರುಗಳಿಗೆ ನಿತ್ಯೋತ್ಸವ ರಥೋತ್ಸವಾದ್ಯುತ್ಸವಗಳಿಗೂ ಈ ದೇವರ ಸೇವೆಯನ್ನು ಮಾಡುವ ಉಪಾದಿ ಬ್ರಾಹ್ಮಣರು ಮುಂತಾದ ಜನಗಳ ಜೀವನಕ್ಕೂ ರಾಮಾನುಜಕೂಟ ನಡೆಸುವುದಕ್ಕಾಗಿ ಬಹಳ ತಸದೀಕುಗಳನ್ನುಂಟು ಮಾಡಿದರು ಮತ್ತು ಅನೇಕ ಗ್ರಾಮ ಭೂಮಿಗಳನ್ನು ಅನೇಕ ಪೂಜೋಪಕರಣ, ಸೇವೋಪಕರಣ ವಸ್ತ್ರಾಭರಣ ಪಾತ್ರೆಗಳನ್ನು ನವರತ್ನ ಖಚಿತವಾದ ಕಂಠೀರವ ಮುಡಿಯನ್ನು ಸಮರ್ಪಿಸಿ ಪ್ರತಿ ದಿನದಲ್ಲಿಯೂ ದೇವರ ದರ್ಶನ ಮಾಡಿ, ತೀರ್ಥ ಪ್ರಸಾದವನ್ನು ಒಪ್ಪಿಸಿಕೊಳ್ಳುತ್ತಿದ್ದರಲ್ಲದೆ, ಆ ದೇವಾಲಯದಲ್ಲಿ ವರದಿಯನ್ನು ನಿತ್ಯ ದಲ್ಲಿಯೂ ಆ ವಿಗ್ರಹದ ಎದುರಿಗೆ ಹೇಳುವಂತೆ ನಿಬಂಧನೆ ಮಾಡಿದರು.[33]

ಶ್ರೀರಂಗಪಟ್ಟಣದಲ್ಲಿ ಕಾವೇರಿ ನದಿಗೆ ಉತ್ತರ ಪಾರ್ಶ್ವದಲ್ಲಿ 'ಕಂಠೀರವಪುರ' ವೆಂಬ ಅಗ್ರಹಾರವನ್ನು ನಿರ್ಮಿಸಿ ಸೋಪಕರಣ ಸೋಪಸ್ಕರವಾಗಿ ಗೃಹಗಳನ್ನು, ವೃತ್ತಿಗಳನ್ನು ತ್ರಮತಸ್ಥ ಬ್ರಾಹ್ಮಣರುಗಳಿಗೂ ಧಾರೆಯೆರೆದು ಕೊಟ್ಟರು.[34] ಪಾಳೆಯಗಾರರ ದಿವಸದಲ್ಲಿ ಸೀಮೆಯ ಮೇಲೆ ಚಿನ್ನದ ನಾಣ್ಯಗಳಿಗೆ ನಾನಾ ವಿಧವಾದ ವಿಗ್ರಹದ ಮುದ್ರೆಗಳು ಇದ್ದುದರಿಂದ ದೊರೆಯು ಒಂದೇ ಬಗೆಯ ವಿಗ್ರಹಣದ ಮುದ್ರೆ ಇರಬೇಕೆಂದು ಟಂಕಸಾಲೆಯನ್ನು ಏರ್ಪಡಿಸಿ, ಯೋಗನೃಸಿಂಹಾಂಕಿತ ವಆದ ಚಿನ್ನದ 'ಕಂಠೀರಾಯಿ' ಹಣವನ್ನುಂಟು ಮಾಡಿ, ಆ ಹಣವು ಎಲ್ಲಾ ದೇಶಗಳಲ್ಲಿಯೂ ಪ್ರಸಿದ್ಧವಾಗಿ ನಡೆಯುವಂತೆಯೂ, ಆ ಹತ್ತು ಹಣಕ್ಕೆ ಕಂಠೀರಾಯಿ ಒಂದು ವರಹವೆಂತಲೂ, ಆ

ಒಂಭತ್ತು ಹಣ ತೂಕಕ್ಕೆ ಒಂದು ವರಹದ ತೂಕವೆಂತಲೂ, ಶಾಲಿವಾನ ಶಕ 1566ನೇ (1643 ಎ.ಡಿ) ಸ್ವಭಾನು ಸಂವತ್ಸರದ ವೈಶಾಖಶುದ್ಧ 14ರಲ್ಲಿ ನಿಬಂಧನೆ ಮಾಡಿದರು.[35]

ಇವರ ಗಾಂಧರ್ವ ಪತ್ನಿಯವರಾದ ದೊಡ್ಡಾಜಮ್ಮನವರು "ಕಾವೇರಿ ನದೀ ಪ್ರವಾಹ ಬಂದ ಕಾಲದಲ್ಲಿ ಕಾಶೀ ರಾಮೇಶ್ವರ ಮುಂತಾದ ಸ್ಥಳಕ್ಕೆ ಜನರು ಹೋಗಿ ಬರಲು ಶ್ರೀರಂಗಪಟ್ಟಣದ ಕೋಟೆಯೊಳಕ್ಕೆ ಹೊರಗಿನಿಂದ ಪದಾರ್ಥಗಳು ಬರುವುದಕ್ಕೂ, ಕೋಟೆಯೊಳಗೆ ವಾಸಮಾಡಿಕೊಂಡಿರುವ ಜನರಿಗೆ ನದಿಯು ದೂರವಾಗಿರುವುದರಿಂದ ಕೋಟೆಯೊಳಕ್ಕೆ ನೀರು ಬರುವುದಕ್ಕೂ ಅನುಕೂಲವಾಗುವಂತೆ ಉಭಯ ಪಾರ್ಶ್ವದ ಕಾವೇರಿಗೆ ಸೇತುವೆಯನ್ನು ಕಟ್ಟಿಸಬೇಕೆಂದು ದೊರೆಗಳಲ್ಲಿ ಭಿನ್ನವಿಸಿಕೊಳ್ಳಲು ಅದಕ್ಕೆ ಕಂಠೀರವ ನರಸರಾಜ ಒಡೆಯರು ಕೋಟೆಗೆ ನೈಋತ್ಯ, ವಾಯುವ್ಯ ಪಾರ್ಶ್ವಗಳೆರಡರಲ್ಲಿಯೂ ಇರುವ ನದಿಗೆ ಎರಡು ಸೇತುವೆಗಳನ್ನು ಕಟ್ಟಿಸಿ, ಗೌತಮ ಕ್ಷೇತ್ರಕ್ಕೆ ದಕ್ಷಿಣ ದಿಕ್ಕಿನ ಚಂದ್ರವನದ ಸಮೀಪದಲ್ಲಿ ಕವಲೊಡೆದ ಕಾವೇರಿಗೆ ಕಟ್ಟೆಯನ್ನು ಕಟ್ಟಿಸಿ ಈ ದೇಶದಲ್ಲಿ ಇದುವರೆಗೂ ಎಲ್ಲಿಯೂ ಇಲ್ಲದ ನೀರ ಮೇಲೆ ನೀರು ಬರುವ ಆಶ್ಚರ್ಯವನ್ನು ತೋರಿಸಿ ಕೋಟೆಗೆ ನೈಋತ್ಯ ಪಾರ್ಶ್ವದಲ್ಲಿ ಕಟ್ಟಿಸಿರುವ ಸೇತುವೆಯ ಮೇಲೆ ಹೊಸದಾಗಿ ಕಾಲುವೆಯನ್ನು ತಂದು, ಕೋಟೆಯೊಳಕ್ಕೆ ಕಾರಂಜಿಯ ನೀರು ಬರುವಂತೆ ಮಾಡಿಸಿ, ಅದಕ್ಕೆ 'ಬಂಗಾರ ದೊಡ್ಡಿ ಕಾಲುವೆ' ಎಂದು ತಮ್ಮ ಪ್ರೇಮಾಸ್ಪದರಾದ ಗಾಂಧರ್ವ ಪತ್ನಿಯವರ ಹೆಸರನ್ನಿಟ್ಟು, ಅದರ ಕೆಳಗೆ ಆದ ಬತ್ತ, ಕಬ್ಬು ಮುಂತಾದವುಗಳನ್ನು ರಂಗನಾಥಸ್ವಾಮಿ ದೇವಸ್ಥಾನಕ್ಕೆ ಕೊಡುವಂತೆ ಕಟ್ಟಳೆಯನ್ನು ಮಾಡಿದರು[36] ಮತ್ತು ಶ್ರೀರಂಗಪಟ್ಟಣದ ರಂಗನಾಥಸ್ವಾಮಿ ದೇವಸ್ಥಾನದ ಗುಡಿಗೋಪುರ ಮಂಟಪಗಳನ್ನು ವಿಸ್ತಾರವಾಗಿ ಹೊರಗಿನ ಪ್ರಕಾರ, ಒಳಗಿನ ಪ್ರಕಾರ, ಉಭಯ ಮುಚ್ಚಳದ ಕಲ್ಲು ಕೆಲಸಗಳನ್ನು ಮಾಡಿಸಿ, ದೇವರಿಗೆ ವೈಕುಂಠಮುಡಿ ಎಂಬ ನವರತ್ನದ ಕಿರೀಟವನ್ನು ಸಮರ್ಪಿಸಿದರು. ಗಂಗಾಧರೇಶ್ವರ ಸ್ವಾಮಿ ದೇವಸ್ಥಾನಕ್ಕೂ ವಿಸ್ತಾರವಾಗಿ ಗುಡಿಗೋಪುರವನ್ನು ಕಟ್ಟಿಸಿ ಈ ಗುಡಿಯಲ್ಲಿ ಪಂಚಲಿಂಗ ಪ್ರತಿಷ್ಟೆಯನ್ನು ಮಾಡಿಸಿದರು. ಕರಿಯಘಟ್ಟದ ವೆಂಕಟರಮಣಸ್ವಾಮಿಯ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿ ವಿಸ್ತಾರವಾಗಿ ಕಟ್ಟಿಸಿ, ಆ ಬೆಟ್ಟಕ್ಕೆ ಸೋಪಾನವನ್ನು ಕಟ್ಟಿಸಿದರು. ನಂಜನಗೂಡು ಶ್ರೀಕಂಠೇಶ್ವರ ಸ್ವಾಮಿಯವರ ಗೌತಮ ರಥವು ಶಿಥಿಲವಾಗಿದ್ದುದರಿಂದ ಅದನ್ನು ನೂತನವಾಗಿ ಮಾಡಿಸಿದರು. ಶ್ರೀ ಚಾಮುಂಡೇಶ್ವರಿ ಅಮ್ಮನವರು, ಉತ್ತನಹಳ್ಳಿ ಜ್ವಾಲಾಮುಖಿ ಅಮ್ಮನವರು, ನಂಜನಗೂಡು, ತಿರುಪತಿ, ಮೇಲುಕೋಟೆ ಮುಂತಾದ ಕ್ಷೇತ್ರಗಳಲ್ಲಿರುವ ಶಿವವಿಷ್ಣು

ಮೊದಲಾದ ಸಮಸ್ತ ದೇವರುಗಳಿಗೂ ಆಯಾ ದೇವಸ್ಥಾನದ ತಾರತಮ್ಯವಿದ್ದಂತೆ ವಸ್ತ್ರಾಭರಣಗಳನ್ನು ಕೊಟ್ಟು ತಸದೀಕನ್ನುಂಟು ಮಾಡಿದರು.

ತಮ್ಮ ಮಾವಂದಿರಾದ ದೊಡ್ಡೇ ಅರಸಿನವರ ಹೆಸರಿನಿಂದ ಅರಿಕುಠಾರದಲ್ಲಿ ದೊಡ್ಡದಾಗಿ ಒಂದು ಸರೋವರವನ್ನು ಕಟ್ಟಿಸಿದರು. ಇವರು ತಾವು ಸಾಧಿಸಿದ ಕಣಿವೆಯ ಕೆಳಗಣ ಸೀಮೆಗಳಲ್ಲಿಯೂ ಕೆಲವು ಅಗ್ರಹಾರಗಳನ್ನು ದಾನಮಾಡಿ ದೇವತಾ ಸೇವೆಯನ್ನು ಮಾಡಿದರು. ಇದಲ್ಲದೆ ಅನೇಕ ಬ್ರಾಹ್ಮಣರುಗಳಿಗೆ ಭಟ್ಟ ಮಾನ್ಯ ರೂಪವಾಗಿ ಜೀವನವನ್ನು ಕಲ್ಪಿಸಿಕೊಟ್ಟು, ತಮ್ಮ ಪೂರ್ವಿಕರು ಮಾಡಿದ ದೇವದಾಯ, ಬ್ರಹ್ಮದಾಯ ಮುಂತಾದ ಧರ್ಮಗಳನ್ನು ಪರಿಪಾಲಿಸುತ್ತಿದ್ದರು.[37] ಈ ಕಂಠೀರವ ನರಸರಾಜ ಒಡೆಯರು ತಮಗೆ ಪಟ್ಟವಾದ ಬಳಿಕ ಪ್ರತಿನಿತ್ಯದಲ್ಲಿಯೂ ಪೂರ್ವದಂತೆ ದಂಪತಿಪೂಜೆ, ಪುರಾಣ ಪಂಚಾಂಗ ಶ್ರಾವಣಗಳು ನಡೆವಂತೆ ಕಟ್ಟಳೆಯನ್ನು ಮಾಡಿ ಪ್ರತಿ ಏಕಾದಶಿಯಲ್ಲಿಯೂ ರುಕ್ಮಾಂಗದ ರಾಯನಂತೆ ಉಪವಾಸ ಜಾಗರಣೆಗಳನ್ನು ಮಾಡಿ ಪಾರಣೆಯನ್ನು ನೆರವೇರಿಸುತ್ತಿದ್ದರು. ಇವರು ವೈಷ್ಣವ ದೀಕ್ಷೆಯನ್ನಂಗೀಕರಿಸಿದವರಾದರೂ, ಶ್ರೀ ವೈಷ್ಣವರ ಮಾತುಗಳನ್ನು ಕೇಳದೆ ತಮ್ಮ ಕುಲದೇವತೆಯಾದ ಶ್ರೀ ಚಾಮುಂಡೇಶ್ವರಿ, ಶ್ರೀಕಂಠೇಶ್ವರ ಮುಂತಾದ ಶಿವದೇವಾಲಯಗಳಲ್ಲಿಯೂ ಭಕ್ತಿಪೂರ್ವಕವಾಗಿ ನಡೆದುಕೊಳ್ಳುತ್ತಾ ಶಿವರಾತ್ರಿ, ಗೌರಿ, ಗಣೇಶ ಮುಂತಾದ ಅನೇಕ ಶೈವ ವ್ರತಗಳನ್ನು ಮಾಡಿಕೊಂಡು ಬರುತ್ತಿದ್ದರು. ಪ್ರತಿದಿನವು ಪಟ್ಟದ ಆಯುಧದ ಸಂಗಡ ವಿಜಯ ನಾರಸಿಂಹನೆಂಬ ಖಡ್ಗಕ್ಕೂ ಪೂಜೆ ನಡೆಯುವಂತೆ ಕಟ್ಟಳೆ ಮಾಡಿದರು.[38] ಈ ರೀತಿಯಲ್ಲಿ ಇವರಿಗೆ ಭೂಲೋಕದಲ್ಲಿ ಒಬ್ಬರು ಸರಿಸಾಟಿ ಇಲ್ಲದಿದ್ದರಿಂದ ಸಾಹಸ ಪರಾಕ್ರಮದಲ್ಲಿ ಕಲಿಯುಗದ ಭೀಮನೆಂದು ಹೊಗಳಿಸಿ ಕೊಳ್ಳುತ್ತಾ ರಣಧೀರ ಕಂಠೀರವ ನರಸರಾಜ ಒಡೆಯವರು ಧರ್ಮದಿಂದ ರಾಜ್ಯ ಪರಿಪಾಲನೆಯನ್ನು ಮಾಡುತ್ತಿದ್ದರು. ಇವರಾದ ನಂತರ ದೊಡ್ಡ ದೇವರಾಜ ಒಡೆಯರು ಇದೇ ಧೋರಣೆಯನ್ನು ಮುಂದುವರೆಸಿದರು.

### ದೊಡ್ಡ ದೇವರಾಜ ಒಡೆಯರವರು ಸ್ಥಾಪಿಸಿದ ಬ್ರಹ್ಮದಾಯ ಮತ್ತು ದೇವದಾಯಗಳು

ದೊಡ್ಡ ದೇವರಾಜ ಒಡೆಯರವರು ಶಾಲಿವಾನ ಶಕ 1587ನೇ (1664 ಎ.ಡಿ) ಕ್ರೋಧಿ ಸಂವತ್ಸರದಲ್ಲಿ ಶ್ರೀ ಚಾಮುಂಡೇಶ್ವರಿ ಅಮ್ಮನವರ ಬೆಟ್ಟಕ್ಕೆ ದೇವರ ದರ್ಶನಕ್ಕಾಗಿ ಜನರು ಹೋಗಿ ಬರಲು ಹಂತವಿಲ್ಲದೆ ಬಹು ಶ್ರಮವಾಗಿದ್ದುದರಿಂದ ಸರ್ವ ಜನರು ಸರಾಗವಾಗಿ ಹೋಗಿ ಬರುವಂತೆ ಗೈದ ಕಲ್ಲುಗಳಿಂದ 1000 ಸೋಪಾನಗಳನ್ನು ಕಟ್ಟಿಸಿದರು ಮತ್ತು ಈ ಬೆಟ್ಟದ ಮಧ್ಯದಲ್ಲಿ

ಆಶ್ಚರ್ಯಕರವಾಗಿಯೂ, ಅತಿ ಸುಂದರವಾಗಿಯೂ ಶಿಲೆಯಿಂದ ಒಂದು ದೊಡ್ಡ ಬಸವನನ್ನು ನಿರ್ಮಿಸಿ ಪ್ರತಿಷ್ಠೆಗೈದು, ಪ್ರತಿ ನಿತ್ಯದಲ್ಲಿಯೂ ಅದಕ್ಕೆ ಪೂಜೆ ನಡೆಯುವಂತೆ ಕಟ್ಟಳೆಯನ್ನು ಮಾಡಿಸಿದರು. ಶಾ. ಶಕ 1588ನೇ (1666 ಎ.ಡಿ) ವಿಶ್ವಾವಸು ಸಂವತ್ಸರದ ಮಾಘ ಬಹುಳ 13 ಗುರುವಾರದಲ್ಲಿ ಈ ಬೆಟ್ಟದ ಕಿಬ್ಬಿನಲ್ಲಿ 63 ಮನೆಗಳನ್ನು ಕಟ್ಟಿಸಿ ತ್ರಿಮತಸ್ಥ ಬ್ರಾಹ್ಮಣರಿಗೂ ಶಿವರಾತ್ರಿಯ ಪುಣ್ಯಕಾಲದಲ್ಲಿ 63 ವೃತ್ತಿಗಳೊಡನೆ ಧಾರೆಯೆರೆದು ಕೊಟ್ಟು ಅದಕ್ಕೆ 'ದೇವರಾಜಪುರ' ವೆಂಬ ನಾಮಧೇಯವನ್ನಿಟ್ಟು ಈ ವೃತ್ತಿವಂತರಾದ ಮಹಾಜನಗಳಿಗೆ ಚೆನ್ನಪಟ್ಟಣಕ್ಕೆ ವಳಿತವಾದ ಕಾನಕಾನಹಳ್ಳಿ ಹೋಬಳಿಗೆ ಸೇರಿದ ಗರಕಹಳ್ಳಿ, ಸೋಗಲ ಮುಂತಾದ 6 ಗ್ರಾಮಗಳನ್ನು ಕೊಟ್ಟು ಆ ಅಗ್ರಹಾರಕ್ಕೆ ತಾಮ್ರದ ಶಾಸನವನ್ನು ಬರೆಸಿಕೊಟ್ಟರು. ಆ ಅಗ್ರಹಾರದ ಬಳಿಯಲ್ಲಿ ಒಬ್ಬ ಜಂಗಮ ಒಡೆಯರಿಗೆ ಒಂದು ದೊಡ್ಡ ಮಠವನ್ನು ಕಟ್ಟಿಸಿ, ಕೆಲವು ಭೂಮಿಯೊಡನೆ ಕೊಟ್ಟು ಅದಕ್ಕೆ 'ಗಚ್ಚೀಮಠ' ಎಂಬುದಾಗಿ ಹೆಸರಿಟ್ಟರು. ಈ ದೇವರಾಜಪುರವೆಂಬ ಅಗ್ರಹಾರಕ್ಕೂ ಮೈಸೂರ ಕೋಟೆಗೂ ನಡುವೆ ಭಾಟಾ ಮಾರ್ಗದಲ್ಲಿ ದೊಡ್ಡದಾಗಿ ಒಂದು ತಟಾಕವನ್ನು ನಿರ್ಮಿಸಿ 'ದೇವಾಂಬುಧಿ' ಎಂಬ ನಾಮಧೇಯವನ್ನಿಟ್ಟು ಇದೇ ವಿಶ್ವಾಸವನ್ನು ಸಂವತ್ಸರದ ಪಾಲ್ಗುಣ ಶುದ್ಧ 15 ಶನಿವಾರ ಉತ್ತರಾ ನಕ್ಷತ್ರದಲ್ಲಿ ಈ ತಟಾಕದ ಪ್ರತಿಷ್ಠೆಯನ್ನು ಮಾಡಿಸಿದರು.

ಮೈಸೂರು ತೃಣೇಶ್ವರಸ್ವಾಮಿ ದೇವಸ್ಥಾನದ ದ್ವಾರಪಾಲಕರ ಮುಂಭಾಗದಲ್ಲಿ ಭದ್ರ ಬಾಗಿಲ ಕೈಸಾಲೆಗೆ ಪೂರ್ವದಲ್ಲಿ ಇರತಕ್ಕ 9 ಅಂಕಣದ ನಿಟ್ಟಿನ ಸೂಡು 3ಕ್ಕೆ 27 ಅಂಕಣಗಳ ಕಲ್ಲು ಮಂಟಪವನ್ನು ಕಟ್ಟಿಸಿ, ಈ ಮಂಟಪದಲ್ಲಿ ಗಣಪತಿ ವೃಷಭ ಸಹಿತವಾಗಿ ಗರುಡ ಗಂಭದಂತೆ ಒಂದು ದೊಡ್ಡ ಶಿಲಾಸ್ತಂಭವನ್ನು ನಿಲ್ಲಿಸಿ, ಈ ದೇವಸ್ಥಾನದ ಮಹಾದ್ವಾರಕ್ಕೆ ಚಿತ್ರ ವಿಚಿತ್ರವಾಗಿ ಶಿಲೆಗಳಿಂದಲೂ, ಗಾರೆಯಿಂದಲೂ ಏಳು ನೆಲೆಯ ಗೋಪುರವನ್ನು ಕಟ್ಟಿಸಿ, ಕೈಸಾಲೆಯ ಅಂಕಣ ಗಳಲ್ಲಿ ಪಂಚವಿಂಶತಿ ಲೀಲಾಮೂರ್ತಿ ವಿಗ್ರಹಗಳನ್ನು ಪ್ರತಿಷ್ಠೆ ಮಾಡಿಸಬೇಕೆಂದು ಕೆಲವು ಶಿಲಾ ವಿಗ್ರಹಗಳನ್ನು ಮಾಡಿಸಿದರು. ಒಂದಾನೊಂದು ರಾಜ ಕಾರ್ಯನಿಮಿತ್ತವಾಗಿ ಆ ವಿಗ್ರಹಗಳಿಗೆ ಈ ದೇವಸ್ಥಾನದ ಗೋಪುರ ಬಾಗಿಲಿಗೆ ಪೂರ್ವಭದ್ರ ಬಾಗಿಲಿಗೆ ಪಶ್ಚಿಮ ಈ ನಡುವೆ ಇರುವ ದೊಡ್ಡಡಿಗೆ ಮನೆಯಲ್ಲಿ ಭೂಸ್ಥಾಪನೆ ಮಾಡಿಸಿ, ಈ ದೇವಸ್ಥಾನದಲ್ಲಿ ಸ್ವಾಮಿಯವರ ಎದುರಿಗೆ ಕೈ ಮುಗಿದುಕೊಂಡು ನಿಂತಿರುವಂತೆ ಶಿಲೆಯಿಂದ ತಮ್ಮ ಭಕ್ತ ವಿಗ್ರಹವನ್ನು ಮಾಡಿಸಿದರು.

ತಿರುಪತಿ ವೆಂಕಟರಮಣ ಸ್ವಾಮಿಯವರಿಗೆ ನಿತ್ಯ ಕಟ್ಟಳೆಯಲ್ಲಿ ಸಹಸ್ರನಾಮರ್ಚನೆ ನಡೆಸುವುದಕ್ಕೆ ಹೂ ತೋಳಸಿ ತೋಟವನ್ನು ನಿರ್ಮಿಸಿ, ನವರತ್ನ ಖಚಿತವಾದ ಮಂಟಪದ ಮಂದಾಸನವನ್ನು, ಪೊಂಗಲು ನೈವೇದ್ಯಕ್ಕೆ ಎರಡು ಚಿನ್ನದ ಗಂಗಾಳುಗಳನ್ನು, ನಂದಾದೀವಿಗೆ ಮುಂತಾದ ಸೇವೆ ನಡೆಸುವುದಕ್ಕೆ ಮತ್ತು ಆ ಸೇವಕ ಜನಗಳ ಜೀವನ ನಡೆಸುವುದಕ್ಕೆ ಗ್ರಾಮಗಳನ್ನು ಒಪ್ಪಿಸಿದರು.[39]

ತಮ್ಮ ಸೀಮೆಯ ಭೂಟಾ ಮಾರ್ಗದಲ್ಲಿ ಗ್ರಾಮದ 1ಕ್ಕೆ 1 ಅನ್ನಸತ್ರ, ಕಲ್ಲುಮಂಟಪ, ತೋಪು, ಎಡತೊರೆ, ರಾಮನಾಥಪುರ, ಮೇಲುಕೋಟೆ, ತಿರುಪತಿ, ಕಾಶಿ, ರಾಮೇಶ್ವರ, ಹಸ್ತಿಗಿರಿ, ಶ್ರೀರಂಗ ಮುಂತಾದ ಪುಣ್ಯಕ್ಷೇತ್ರಗಳಲ್ಲಿ ವಾಸ ಮಾಡಿಕೊಂಡಿರುವ ಬಡವರಾದ ಬ್ರಾಹ್ಮಣರಿಗೆ ಕನ್ಯಾದಾನ ಉಪನಯನ ದಾನಗಳನ್ನು ಮಾಡಿದರಲ್ಲದೆ ಅನೇಕ ಯಜ್ಞಗಳನ್ನು ಮಾಡಿಸಿ, ಬ್ರಾಹ್ಮಣರಿಗೆ ಭಟ್ಟಮಾನ್ಯ, ವರ್ಷಾಶನ, ಮಾಸಾಶನ ಮುಂತಾದ ಜೀವನವನ್ನು ಕಲ್ಪಿಸಿ ತಮ್ಮ ಪೂರ್ವಿಕರು ಮಾಡಿದ ದಾನ ಧರ್ಮಗಳನ್ನು ಚೆನ್ನಾಗಿ ಪರಿಪಾಲಿಸುತ್ತಿದ್ದರು. ತಮ್ಮ ಕುಲದೇವತೆಯಾದ ಶ್ರೀ ಚಾಮುಂಡೇಶ್ವರಿ ಅಮ್ಮನವರಿಗೂ, ಶ್ರೀಕಂಠೇಶ್ವರ ಸ್ವಾಮಿಯವರಿಗೂ ಮೇಲುಕೋಟೆ, ಶ್ರೀರಂಗಪಟ್ಟಣ, ಮೈಸೂರು ಮುಂತಾದ ಸ್ಥಳಗಳಲ್ಲಿರುವ ದೇವರುಗಳಿಗೂ ಅನೇಕ ವಸ್ತ್ರಾಭರಣ ಗ್ರಾಮ ಭೂಮಿಗಳನ್ನು ಕೊಟ್ಟು ದೇವತಾ ಸೇವೆಯನ್ನು ಚೆನ್ನಾಗಿ ನಡೆಸುತ್ತಿದ್ದರು. ಶ್ರೀರಂಗಪಟ್ಟಣದ ಕಾವೇರಿ ಮಣಿಕರ್ಣಿಕಾ ತೀರದಲ್ಲಿ ಪ್ರತಿನಿತ್ಯದಲ್ಲಿಯೂ ಸಹಸ್ರ ಬ್ರಾಹ್ಮಣ ಸಂತರ್ಪಣೆ ಆಗ ಬೇಕೆಂದಾಲೋಚಿಸಿ, ಆ ತೀರದಲ್ಲಿ ಮನೆಗಳನ್ನು ಕಟ್ಟಿಸಿ 'ದೇವರಾಜ ಸಮುದ್ರ'ವೆಂಬ ಅಗ್ರಹಾರವನ್ನು ನಿರ್ಮಿಸಿ, ತ್ರಿಮತಸ್ಥ ಬ್ರಾಹ್ಮಣರಿಗೂ ವೃತ್ತಿಗಳೊಡನೆ ಧಾರೆಯೆರೆದು ಕೊಟ್ಟರು.[40] ದೊರೆಗಳವರು ತಮ್ಮ ಪೂರ್ವದ ಸೀಮೆಗಳ ಮತ್ತು ತಾವು ಸಾಧಿಸಿದ ಸೀಮೆಗಳ ಆದಾಯ ವ್ಯಯಗಳನ್ನು ನೋಡಿಕೊಂಡು ಬೊಕ್ಕಸದಲ್ಲಿ ನಿಲ್ಲಿಸತಕ್ಕ ದ್ರವ್ಯಗಳನ್ನು ನಿಲ್ಲಿಸಿ 'ಷೋಡಶ ಮಹಾದಾನ'ಗಳನ್ನು ಮಾಡಬೇಕೆಂದು ಸಂಕಲ್ಪಿಸಿ, ಆಯಾ ಪುಣ್ಯ ಕಾಲದಲ್ಲಿ ವರ್ಷಕ್ಕೆ ಎರಡೂ ಮೂರರ ಮೇರೆಗೆ ರಂಗನಾಥ ಸ್ವಾಮಿ ಸನ್ನಿಧಿಯಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ (1) ತುಲಾಪುರುಷದಾನ (2) ಹಿರಣ್ಯ ಗರ್ಭದಾನ (3) ಬ್ರಹ್ಮಾಂಡದಾನ (4) ಕಲ್ಪವೃಕ್ಷದಾನ (5) ಗೋಸಹಸ್ರದಾನ (6) ಹಿರಣ್ಯ ಕಾಮಧೇನುದಾನ (7) ಹಿರಣ್ಯಾಶ್ಯದಾನ (8) ಹಿರಣ್ಯಾಶ್ವರದಾನ (9) ಹೇಮಹಸ್ತಿರಥದಾನ (10) ಪಂಚಲಾಂಗಲದಾನ (11) ಧರದಾನ (12) ವಿಶ್ವಚಕ್ರದಾನ (13) ಕಲ್ಪಲತಾದಾನ (14) ಸಪ್ತಸಾಗರದಾನ (15) ರತ್ನಧೇನುದಾನ (16) ಮಹಾಭೂತ ಘಟದಾನ. ಈ ಮೇರೆಗೆ ಷೋಡಶ ಮಹಾದಾನಗಳನ್ನು ಶಾಸ್ತ್ರಕ್ಕೆ ಸ್ವಲ್ಪವೂ

ನ್ಯೂನತೆ ಇಲ್ಲದಂತೆ ಮಾಡಿ ಸತ್ಕೀರ್ತಿಯನ್ನು ಪಡೆದರು.[41] ಈ ದೊಡ್ಡ ದೇವರಾಜ ಒಡೆಯರವರು ಪ್ರತಿನಿತ್ಯದಲ್ಲಿಯೂ ಸ್ನಾನ ಸಂಧ್ಯಾವಂದನೆಯನ್ನು ಮಾಡಿದ ಬಳಿಕ ಶ್ರಿಮದ್ರಾಮಾಯಣ ಪಾರಾಯಣ, ನಿತ್ಯದಾನ, ಗೋದಾನ, ದಂಪತಿಪೂಜೆ, ಗೋಪೂಜೆಗಳನ್ನು ಮಾಡುತ್ತ ಬ್ರಾಹ್ಮಣರುಗಳ ಮುಖ ದಿಂದ ಅಷ್ಟದಶಪುರಾಣ, ಉಪಪುರಾಣ, ಆಯಾಕ್ಷೇತ್ರ ಮಹಾತ್ಮೆ ಮೊದಲಾದವುಗಳನ್ನು ಕೇಳಿದ ನಂತರ ತಮ್ಮ ಅರಮನೆಯ ಚಾಮುಂಡೇಶ್ವರಿ ಮತ್ತು ಕೃಷ್ಣದೇವರ ದರ್ಶನವನ್ನು ಮಾಡಿ ತೀರ್ಥ ಪ್ರಸಾದವನ್ನು ಸ್ವೀಕರಿಸಿ. ಆರೋಗಣೆಯನ್ನು ಒಪ್ಪಿಸಿಕೊಳ್ಳುತ್ತಿದ್ದರು.

### ಚಿಕ್ಕದೇವರಾಜ ಒಡೆಯರು ಸ್ಥಾಪಿಸಿದ ಬ್ರಹ್ಮದಾಯ ಮತ್ತು ದೇವದಾಯಗಳು

ಚಿಕ್ಕದೇವರಾಜ ಒಡೆಯರು ತಮಗೆ ಪಟ್ಟವಾದ ಕೂಡಲೇ ಶಾಲಿವಾನ ಶಕ 1569ನೇ (1673 ಎ.ಡಿ) ಪ್ರಮಾದೀಚ ಸಂವತ್ಸರದಲ್ಲಿ ಗುಂಡಲು ಎಂಬ ಗ್ರಾಮದ ಬಳಿ ಕೌಂಡಿನೀನದಿಯ ತೀರದಲ್ಲಿ ದೇವ ಸ್ಥಾನವನ್ನು ಕಟ್ಟಿಸಿ, ಅದರಲ್ಲಿ ಅಪ್ರತಿಪರವಾಸು ದೇವರನ್ನು ಕಮಲವಲ್ಲಿ ಎಂಬ ಅಮ್ಮನವರನ್ನೂ ಸರ್ವರೂ ತೀರ್ಥ ಪರಿಗ್ರಹ ಮಾಡಬೇಕೆಂದು ಶಿವ ಸಮುದ್ರದಿಂದ ಉಭಯ ನಾಚ್ಚಿಯಾರು ಸಹಿತವಾಗಿದ್ದ ಉತ್ಸವ ವಿಗ್ರಹವನ್ನು ತರಿಸಿ ಪ್ರತಿಷ್ಟೆ ಮಾಡಿಸಿ, ಈ ದೇವರಿಗೆ ನಿತ್ಯೋತ್ಸವ ರಥೋತ್ಸವಾದ್ಯುತ್ಸವಗಳು, ಪಡಿತರ, ದೀಪಾರಾಧನೆ, ರಾಮಾನುಜಕೂಟ ಮುಂತಾದ್ದು ನಡೆವುದಕ್ಕೆ 6 ಸಾವಿರ ವರಹಗಳ ತಸದೀಕನ್ನು ನಿಬಂಧನೆ ಮಾಡಿ, ಈ ತಸದೀಕೆಗೆ ಉಯ್ಯಂಬಳ್ಳಿ, ದೊಡ್ಡ ತುಪ್ಪೂರು, ಉಡಿಗಾಲ ಮುಂತಾದ ಗ್ರಾಮಗಳನ್ನು ಕೆಲವು ನಗದನ್ನು ಕೊಡುವಂತೆ ಕಟ್ಟಳೆ ಮಾಡಿ, ಈ ದೇವಸ್ಥಾನದ ಕಂಬದಲ್ಲಿ ಸಿಂಹಾಸನದ ಮೇಲೆ ವಾರಶಿಖಿ ಸಹಿತವಾಗಿರುವಂತೆ ತಮ್ಮ ಭಕ್ತ ವಿಗ್ರಹವನ್ನು ಮಾಡಿಸಿ, ದೇವಸ್ಥಾನದ ಮುಂಭಾಗದಲ್ಲಿ ಕಾಶಿ ಕೆಲಸದ ಕಲ್ಲಿನಿಂದ ದೊಡ್ಡದಾಗಿ ಕಲ್ಯಾಣಿ ಎಂಬ ಸರೋವರವನ್ನು ಕಟ್ಟಿಸಿದರು. ಇದೇ ಪ್ರೇಮಾದೀಚ ಸಂವತ್ಸರದ ಪಾಲ್ಗುಣ ಶುದ್ಧ 5 ರಲ್ಲಿ ತಮ್ಮ ತಂದೆಯವರಾದ ದೊಡ್ಡ ದೇವರಾಜ ಒಡೆಯರವರ ಆಬ್ದಿಕ ಪುಣ್ಯಕಾಲದಲ್ಲಿ ಅವರಿಗೆ ಶಾಶ್ವತವಾದ ವೈಕುಂಠದ ಪ್ರಾಪ್ತಿ ಆಗಬೇಕೆಂದು ಶ್ರೀರಂಗಪಟ್ಟಣದ ರಂಗನಾಥದೇವರ ಸನ್ನಿಧಿಯಲ್ಲಿ ತ್ರಿಮತಸ್ಥ ಬ್ರಾಹ್ಮಣರಿಗೂ ವೃತ್ತಿಯನ್ನು ಧಾರೆಯೆರೆದು ಕೊಟ್ಟು, ಈ ಬ್ರಾಹ್ಮಣರು ಸುಖವಸತಿ ಯಾಗಿರುವುದಕ್ಕೆ ತಾವು ಗುಂಡಲಿನಲ್ಲಿ ಕಟ್ಟಿಸಿರುವ ಆ ಪ್ರತಿಪರ ವಾಸುದೇವರ ಗುಡಿಯ ಮುಂಭಾಗ ದಲ್ಲಿ ಚತುರಶ್ರವಾಗಿ ನಾಲ್ಕು ಬೀದಿಗಳನ್ನು ಮಾಡಿಸಿ, ಮನೆಗಳನ್ನು ಕಟ್ಟಿಸಿ ವೃತ್ತಿವಂತರಾದ ಮಹಾ ಜನಗಳಿಗೆ ಗ್ರಾಮಭೂಮಿ, ಗೃಹೋಪಕರಣ, ಪೂಜೋಪಕರಣ ಸಹಿತವಾಗಿ ಕೊಟ್ಟು ಈ ಅಗ್ರಹಾರಕ್ಕೆ 'ದೇವನಗರ' ಎಂಬ ಹೆಸರನ್ನಿಟ್ಟು, ಪ್ರಥಮ ಶತಕ ಎಂಬುದಾಗಿ ನಾಮವನ್ನುಂಟು

ಮಾಡಿದರು. ಇದೇ ಪರಿಯಾಗಿ ಇವರ ದೊಡ್ಡಪ್ಪಾಜಿಯವರಾದ ದೊಡ್ಡ ದೇವೇ ಅರಸಿನವರ ಕುಟುಂಬ ಅಮೃತಮ್ಮನವರು ತಮ್ಮ ಪತಿಗೆ ಶಾಶ್ವತ ಪರಲೋಕ ಬರಬೇಕೆಂದು ಕೇಳಿಕೊಂಡುದ ರಿಂದ, ದೊರೆಗಳು ತಮ್ಮ ದೊಡ್ಡಪ್ಪಾಜಿಯವರ ಪ್ರತ್ಯಾಬ್ಧಿಕ ಪುಣ್ಯಕಾಲದಲ್ಲಿ ಆನಂದ ಸಂವತ್ಸರದ ಮಾರ್ಗಶಿರ ಬಹುಳ 3 ರಲ್ಲಿ ಈ ಪರವಾಸುದೇವರ ಗುಡಿಯ ಉತ್ತರ ಪಾರ್ಶ್ವದಲ್ಲಿ ಚತುರಶ್ರವಾಗಿ ನಾಲ್ಕು ಬೀದಿಗಳನ್ನು ಮಾಡಿಸಿ ಮನೆಗಳನ್ನು ಕಟ್ಟಿಸಿ, ತ್ರಿಮತಸ್ಥ ಬ್ರಾಹ್ಮಣರಿಗೂ ವೃತ್ತಿಯೊಡನೆ ಧಾರೆಯೆರೆದು ಕೊಟ್ಟು ಇದು ದ್ವಿತೀಯ ಶತಕ ಎಂಬುದಾಗಿ ನಾಮವನ್ನುಂಟು ಮಾಡಿದರು. ಅನಂತರ ಮತ್ತೆ ಕೆಲವು ದಿವಸದ ಮೇಲೆ ಸ್ವನಾಮಾಂಕಿತವಾಗಿ ಅಗ್ರಹಾರವನ್ನು ಕಟ್ಟಿಸಿ ತ್ರಿಮತಸ್ಥ ಬ್ರಾಹ್ಮಣರುಗಳಿಗೆ ವೃತ್ತಿಯೊಡನೆ ಧಾರಾಪೂರ್ವಕವಾಗಿ ಕೊಟ್ಟು ಇದಕ್ಕೆ ತೃತೀಯ ಶತಕ ಎಂಬುದಾಗಿ ಹೆಸರನ್ನುಂಟು ಮಾಡಿದರು.

ಈ ಮೂರು ಅಗ್ರಹಾರಗಳ ಬ್ರಾಹ್ಮಣರ ಗೋತ್ರ, ಸೂತ್ರ, ನಾಮಗಳನ್ನು, ಗ್ರಾಮಗಳ ಹೆಸರುಗಳನ್ನು, ತಾಮ್ರ ಶಾಸನದಲ್ಲಿ ಬರೆಸಿಕೊಟ್ಟರು ಮತ್ತು ಈ ಅಗ್ರಹಾರಗಳ ಮುಂದುಗಡೆಯಲ್ಲಿ ಪೇಟೆಯನ್ನು ಕಟ್ಟಿಸಿ, ಸಂತೆ ಆಗುವಂತೆ ಕಟ್ಟಳೆಯನ್ನು ಮಾಡಿಸಿದರು. ಈ ಮೂರು ಅಗ್ರಹಾರಗಳ ತ್ರಿಮತಸ್ಥ ಬ್ರಾಹ್ಮಣರುಗಳಲ್ಲಿ ಶ್ರೀ ವೈಷ್ಣವರಿಗೆ ಪರವಾಸು ದವರಗುಡಿ, ಸ್ಮಾರ್ತರಿಗೆ ಪರಶುರಾಮ ದೇವರಿಂದ ಪ್ರತಿಷ್ಟಿತವಾದ ರಾಮೇಶ್ವರ ದೇವಾಲಯ, ಮಾಧ್ವರಿಗೆ ಆಂಜನೇಯ ದೇವಸ್ಥಾನ ಎಂದು ನೇಮಕ ಮಾಡಿದರು.[42]

ತಂಜಾವೂರಿನಲ್ಲಿ ಯೋಕೋಜಿಯ ಮಗ ಸಹಜಿ ಎಂಬುವನು ಒಂದಾನೊಂದು ದಿವಸ ತನ್ನ ಸಭೆಯಲ್ಲಿ "ಮೈಸೂರು ಸೀಮೆಯಲ್ಲಿ ಮೇಲುಕೋಟೆ ಹೊರತು ಪ್ರಸಿದ್ಧವಾದ ವಿಷ್ಣುಕ್ಷೇತ್ರ ಇನ್ನಾವುದು ಇಲ್ಲ; ನಮ್ಮ ದೇಶದಲ್ಲಾದರೋ ಶ್ರೀರಂಗ, ಶ್ರೀಮುಷ್ಣ, ಕುಂಭಕೋಣ, ಮನ್ನಾರುಗುಡಿ ಮುಂತಾದ ಅನೇಕ ವಿಷ್ಣುಕ್ಷೇತ್ರಗಳಿರುವುದಲ್ಲದೆ, ಚಿದಂಬರ, ಮಧ್ಯಾರ್ಜುನ, ಮಧುರೆ, ರಾಮೇಶ್ವರ ಮೊದಲಾದ ಶಿವಕ್ಷೇತ್ರಗಳೂ ಇರುವುದರಿಂದ ನಮ್ಮ ದೇಶಕ್ಕೆ ಸಮಾನವಾದದ್ದು ಯಾವುದು ಇಲ್ಲ" ಎಂದು ದೂಷಿಸುತಲಿದಾನೆಂಬ ವರ್ತಮಾನವನ್ನು ಚಿಕ್ಕದೇವರಾಜ ಒಡೆಯರವರು ಕೇಳಿ, ಕುಪಿತರಾಗಿ ಸಪ್ತಕಲ್ಪಗಳಲ್ಲಿ ಈಗ ಶ್ವೇತ ವರಾಹ ಸ್ವಾಮಿಯನ್ನು ಇಲ್ಲಿಗೆ ತರಿಸಬೇಕೆಂದು ಬುದ್ಧಿವಂತರಾದ ಜನಗಳ ಕೈಲಿ ರಹಸ್ಯವಾಗಿ ದ್ರವ್ಯವನ್ನು ಕೊಟ್ಟು ಕಳುಹಿಸಿದರು. ಆ ಜನಗಳು ಅಲ್ಲಿಗೆ ಹೋಗಿ ಅರ್ಚಕ ಮುಂತಾದವರುಗಳಿಗೆ ದ್ರವ್ಯಗಳನ್ನು ಕೊಟ್ಟು ರಾತ್ರಿ ವೇಳೆಯಲ್ಲಿ ಅಲ್ಲಿಯ ಜನರು ಯಾರೂ

ಅರಿಯದಂತೆ ಶ್ವೇತಾವರಹಾಸ್ವಾಮಿಯನ್ನು ಬಿಜಯ ಮಾಡಿಸಿಕೊಂಡು ಶ್ರೀರಂಗಪಟ್ಟಣಕ್ಕೆ ತಂದು, ಅರಮನೆಯ ಬಲಭಾಗದಲ್ಲಿ ವಿಚಿತ್ರವಾದ ಗುಡಿಯನ್ನು ಕಟ್ಟಿಸಿ, ಶ್ವೇತ ವರಹಾಸ್ವಾಮಿಯವರನ್ನು ನೂತನವಾಗಿ ಶಿಲೆಯಿಂದ ನಿರ್ಮಿಸಿದ ಅಂಬುಜವಲ್ಲಿ ತಾಯರೆಂಬ ವಿಗ್ರಹವನ್ನು, ಉಭಯ ನಾಚ್ಚಿಯಾರು ಸಹಿತವಾದ ಉತ್ಸವ ವಿಗ್ರಹವನ್ನು ಪ್ರತಿಷ್ಠೆ ಮಾಡಿಸಿದರು ಮತ್ತು ಹರದನಹಳ್ಳಿಯಲ್ಲಿ ನೂತನವಾಗಿ ದೇವಸ್ಥಾನವನ್ನು ಕಟ್ಟಿಸಿ, ಗೋಪಾಲ ಕೃಷ್ಣಸ್ವಾಮಿಯವರನ್ನು ಪ್ರತಿಷ್ಠೆ ಮಾಡಿಸಿದರು. 'ಬರಕೋಡು' ಎಂಬ ಗ್ರಾಮದಲ್ಲಿ ದೇವಸ್ಥಾನವನ್ನು ಕಟ್ಟಿಸಿ ವರದ ರಾಜಸ್ವಾಮಿಯವರನ್ನು ಪ್ರತಿಷ್ಠೆ ಮಾಡಿಸಿ ಈ ಗ್ರಾಮದಲ್ಲಿ ಕಾಶಿಯ ಕೆಲಸದಿಂದ ಅತಿರಮಣೀಯವಾಗಿ ದೊಡ್ಡದಾದ ಒಂದು ಸರೋವರವನ್ನು ಕಲ್ಲಿನಿಂದ ಕಟ್ಟಿಸಿ, ಆ ಸರೋವರಕ್ಕೆ 'ಕಲ್ಯಾಣಿ' ಎಂಬುದಾಗಿ ಹೆಸರನ್ನಿಟ್ಟರು. ಇದಲ್ಲದೆ ಅನೇಕ ಸ್ಥಳಗಳಲ್ಲಿ ಶಿವ, ವಿಷ್ಣು, ಗಣಪತಿ, ಆಂಜನೇಯ ಮುಂತಾದ ಅನೇಕ ದೇವರುಗಳನ್ನು ಪ್ರತಿಷ್ಠೆ ಮಾಡಿಸಿ ಆ ದೇವರುಗಳ ತಾರತಮ್ಯವಿದ್ದಂತೆ ಬಹಳ ತಸದೀಕನ್ನುಂಟು ಮಾಡಿ ರಥೋತ್ಸವಾದ್ಯುತ್ಸವಗಳು ನಡೆವಂತೆ ಕಟ್ಟಳೆ ಮಾಡಿದರು ಮತ್ತು ಕಟಾಕ, ಆರಾಮ, ಸರೋವರ, ಸಾಲಮರ ಮುಂತಾದ ಅನೇಕ ಧರ್ಮಕಾರ್ಯಗಳನ್ನು ಬಹಳವಾಗಿ ಮಾಡಿದರು. ಇದಲ್ಲದೆ ತಮ್ಮ ಕುಲದೇವತೆಯಾದ ಶ್ರೀ ಚಾಮುಂಡೇಶ್ವರಿ ಅಮ್ಮನವರು, ನಂಜನಗೂಡು ಶ್ರೀಕಂಠೇಶ್ವರ ಸ್ವಾಮಿ, ಮೇಲುಕೋಟೆ, ಶ್ರೀರಂಗಪಟ್ಟಣ, ಎಡತೊರೆ, ರಾಮನಾಥಪುರ, ಕರಿಯಘಟ್ಟ ಮುಂತಾದ ತಮ್ಮ ಸೀಮೆಯ ಪುಣ್ಯಕ್ಷೇತ್ರಗಳಲ್ಲಿರುವ ದೇವರುಗಳಿಗೆಲ್ಲಾ ಪೂರ್ವದ ಸೇವೆಗಿಂತಲೂ ಸ್ವನಾಮಾಂಕಿತವಾಗಿ ಅಧಿಕ ಸೇವೆಯನ್ನು ಮಾಡಿಸಿ, ಕಾಶಿ, ರಾಮೇಶ್ವರ, ಪ್ರಯಾಗ, ದ್ವಾರಕ, ಜಗನ್ನಾಥ, ತಿರುಪತಿ, ಕಂಚಿ, ಶ್ರೀರಂಗ, ಕುಂಭಕೋಣ, ಶಂಖಮುಖಿ, ಧರ್ಭಶಯನ, ಸುಬ್ರಹ್ಮಣ್ಯ ಮುಂತಾದ ಪ್ರಸಿದ್ಧ ಕ್ಷೇತ್ರಗಳಲ್ಲಿ ತುಪ್ಪದ ನಂದಾದೀವಿಗೆ, ಸಹಸ್ರನಾಮಾರ್ಚನೆ, ಚಿನ್ನದ ತಳಿಗೆಯಲ್ಲಿ ಪೊಂಗಲು ನೈವೇದ್ಯ ಮೊದಲಾದುದು ಅಲ್ಲಲ್ಲಿಯ ಸಂಪ್ರದಾಯದ ಮೇರೆಗೆ ನಡೆಯುವಂತೆಯೂ ಕಟ್ಟಳೆ ಮಾಡಿದರು ಮತ್ತು ನಂಜನಗೂಡು ಶ್ರೀಕಂಠೇಶ್ವರ ಸ್ವಾಮಿಗೆ ಪ್ರತಿನಿತ್ಯದಲ್ಲಿಯೂ ಮುತ್ತಿನ ಸಹಸ್ರ ನಾಮಾರ್ಚನೆ ಮಾಡಿಸಿದುದಲ್ಲದೆ ತಿರುಪತಿ ವೆಂಕಟರಮಣಸ್ವಾಮಿಯವರಿಗೆ ಚಿನ್ನದ ಛತ್ರಿ ಮುಂತಾದ ಸೇವೋಪಕರಣ, ಪೂಜೋಪಕರಣ, ವಸ್ತ್ರಾಭರಣ ಮುಂತಾದ ಪದಾರ್ಥಗಳನ್ನು ಒಪ್ಪಿಸಿದರು ಮತ್ತು ಮೇಲುಕೋಟೆಯಲ್ಲಿ ಕಲ್ಯಾಣಿ ಮೊದಲಾದ ಅಷ್ಟತೀರ್ಥಗಳಲ್ಲಿ 'ಗಜೇಂದ್ರ ಮೋಕ್ಷದ್ಯುತ್ಸವ' ಗಳಿಗೆ ಕೈಸಾಲೆಗಳನ್ನು, ಮಂಟಪಗಳನ್ನು, ಸ್ವನಾಮಾಂಕಿತವಾಗಿಯೂ, ಸ್ವಪತ್ನಿ ನಾಮಾಂಕಿತವಾಗಿಯೂ ಅನೇಕವಾಗಿ ಮಾಡಿಸಿದರು. 84 ಗಡಿಗಳಲ್ಲಿ ಆಗ ಮೋಕ್ಷವಾಗಿ ಉತ್ಸವ ನಡೆಯತಕ್ಕ ದೇವಸ್ಥಾನಗಳಲ್ಲದೆ ಬಿಡಿ ದೇವಸ್ಥಾನಗಳಲ್ಲಿರುವ ಮಾದೇಶ್ವರ, ಬಸವೇಶ್ವರ, ವೀರಭದ್ರ, ಭೈರವದೇವರು, ಶಕ್ತಿ

ದೇವತೆಗಳು, ಮಾರಿಜನದೇವರು ಮುಂತಾದ ಸಕಲ ದೇವರುಗಳಿಗೂ ಅಲ್ಲಲ್ಲಿಯ ತಾರತಮ್ಯವಿದ್ದಂತೆ ಪೂರ್ವದ ತಸದೀಕಿಗಿಂತ ಹೆಚ್ಚಾಗಿ ಕೆಲವು ನಗದು, ಭೂಮಿ, ಕೆಲವು ಜೋಡಿ ಗ್ರಾಮ ಇವುಗಳನ್ನು 'ಕೂಡಿಗೆ' ಎಂಬ ಹೆಸರಿನಿಂದ ಕೊಟ್ಟರು. ಅನೇಕ ಜನ ಬ್ರಾಹ್ಮಣರಿಗೂ, ತ್ರಿಮತಸ್ಥ ಮಠಪತಿಗಳಿಗೂ, ಜಂಗಮ ಮಠಕ್ಕೂ ಸಹ ವಸ್ತ್ರಾಭರಣ ಮರ್ಯಾದೆಗಳನ್ನು ಮಾಡಿ ಗ್ರಾಮ ಭೂಮಿಗಳನ್ನು ಕೊಟ್ಟರು.[43] ಚಿಕ್ಕದೇವರಾಜ ಒಡೆಯರವರು ಹಂಗಳದಲ್ಲಿದ್ದಾಗ ಜಾತಕ ಭಾವವನ್ನು ನೋಡಿ ಇಂಥಾ ದಿವಸದ ಇಷ್ಟನೆಯ ಗಳಿಗೆಯಲ್ಲಿ ನಿಮಗೆ ಶ್ರೀರಂಗಪಟ್ಟಣದಲ್ಲಿ ರಾಷ್ಟ್ರಾಧಿಪತ್ಯವಾಗಿ ಬಹಳ ಯಶಸ್ಸನ್ನು ಪಡೆಯುವಿರಿ ಎಂದು ತೆರಕಣಾಂಬಿಯ ಲಿಂಗಾಭಟ್ಟನೆಂಬ ಬ್ರಾಹ್ಮಣನು ಹೇಳಿದ ಮಾತು ಅನುಭವಕ್ಕೆ ಬಂದುದರಿಂದ ಪಟ್ಟವಾದ ಕೂಡಲೇ ಆ ಬ್ರಾಹ್ಮಣನನ್ನು ಕರೆಸಿ, ಒಂದು ಗ್ರಾಮವನ್ನು ಸರ್ವಮಾನ್ಯವಾಗಿ ಧಾರೆಯೆರೆದು ಕೊಟ್ಟರು. ಅನಂತರ ಆ ಬ್ರಾಹ್ಮಣನು ತನ್ನ ಹೆಸರಿನಿಂದ ಅಗ್ರಹಾರ, ಭಟ್ಟಿಮಾನ್ಯ ಮುಂತಾದ ಬ್ರಹ್ಮದಾಯಗಳನ್ನು ಪೂರ್ವದಂತೆ ನಿರುಪಾಧಿಕವಾಗಿ ನಡೆಸುತ ಲಿದ್ದುದಲ್ಲದೆ, ತಮ್ಮ ಸೀಮೆಯಲ್ಲಿ ಜೀವನವಿಲ್ಲದೆ ಕಷ್ಟಪಡುತಲಿರುವ ಬ್ರಾಹ್ಮಣರುಗಳಿಗೆಲ್ಲಾ ಭಟ್ಟಿಮಾನ್ಯಗಳನ್ನು ಕೊಟ್ಟು, ಮದುವೆ, ಮುಂಜಿ ಮುಂತಾದ ಅನೇಕ ಧರ್ಮಕಾರ್ಯಗಳಣ್ನು ಮಾಡಿ ಜೋಗಿ, ಜಂಗಮ, ಫಕೀರ, ಕುರುಡರು, ಕುಂಟರು, ಹೆಳವರು, ಮೂಕರು ಮುಂತಾದ ಜನರಿಗೆಲ್ಲಾ ಜೀವನವನ್ನು ಕಲ್ಪಿಸಿ, ಮಕಾನುಗಳಿಗೂ ಕೆಲವು ನಗದನ್ನು ಭೂಮಿಯನ್ನು ಕೊಟ್ಟು ಯುದ್ಧದಲ್ಲಿ ತೀರಿಹೋದ ಜನಗಳ ಹೆಂಡಿರ ಮಕ್ಕಳಿಗೆ 'ರಕ್ತಕೊಡಿಗೆ' ಎಂಬುದಾಗಿ ಭೂಮಿಯನ್ನು ಕೊಟ್ಟು ತಮ್ಮ ದೊರೆತನದಲ್ಲಿ ಸಕಲ ಪ್ರಾಣಿಗಳೂ ಜೀವನ ಮಾಡಿಕೊಂಡು ಸರ್ವರು ತಮ್ಮ ತಮ್ಮ ವರ್ಣಾಶ್ರಮ ಧರ್ಮದಲ್ಲಿ ಇದ್ದುಕೊಂಡು ಸುಖವಾಗಿರುವಂತೆ ಆಳಿದರು.[44]

## ಕಂಠೀರವ ಮಹಾರಾಜ ಒಡೆಯರು ಸ್ಥಾಪಿಸಿದ ಬ್ರಹ್ಮದಾಯ ಮತ್ತು ದೇವದಾಯಗಳು

ಇವರು ತಮ್ಮ ಪೂರ್ವಿಕರು ಮಾಡಿದ ದೇವದಾಯ, ಬ್ರಹ್ಮದಾಯ, ಮಠಗಳು, ಸತ್ರಗಳು ಇವುಗಳನ್ನು ಪೂರ್ವ ನಿಬಂಧನೆಯಂತೆ ನಡೆಸಿದುದಲ್ಲದೆ ಜೋಗಿ, ಜಂಗಮ, ಫಕೀರ ಮುಂತಾದ ಜನಗಳಿಗೂ ಜೀವನವನ್ನು ಕಲ್ಪಿಸಿ; ಮೇಲುಕೋಟೆಯಲ್ಲಿ ಸ್ವನಾಮಾಂಕಿತವಾಗಿ ಒಂದು ಮಾಧವನ ಗುಡಿಯನ್ನು ಕಟ್ಟಿಸಿ, ತಮ್ಮ ಸೀಮೆಯಲ್ಲಿ ಬ್ರಾಹ್ಮಣರು ಮೊದಲಾದ ಜನಗಳಿಗೆ 'ಭಟ್ಟಿಮಾನ್ಯ' ಮುಂತಾದ ಜೀವನವನ್ನು ಮಾಡಿಕೊಟ್ಟು, ತಮ್ಮಲ್ಲಿ ಪ್ರಧಾನತನವನ್ನು ಮಾಡಲಿರುವ ಲಿಂಗಣ್ಣಯ್ಯನ ತಂದೆ ಕರಣಿಕ ಲಿಂಗಣ್ಣಯ್ಯ ಕರಿಕಲ್ಲು (ಪ್ರತಿನಾಮಧೇಯ ಕಂಠೀರವ ಸಮುದ್ರ) ಗ್ರಾಮದಲ್ಲಿ ಪ್ರತಿಷ್ಠೆಯನ್ನು ಮಾಡಿಸಿರುವ ಗಂಗಾವಿಶ್ವೇಶ್ವರ, ಗೋಪಾಲ, ಕೃಷ್ಣಸ್ವಾಮಿ ಮುಂತಾದ ದೇವರ

ಸೇವೆಗಳಿಗೂ ಕೆಲವು ಬ್ರಾಹ್ಮಣರು ಜೀವನಾರ್ಥವಾಗಿ ಅಗ್ರಹಾರವನ್ನು ಮಾಡುವುದಕ್ಕೂ ಸಹ ಧರ್ಮ ಪುರ ಮುಂತಾದ ಕೆಲವು ಗ್ರಾಮಗಳನ್ನು ಕರಿಕಲ್ಲು ಗ್ರಾಮದ ಬಳಿ ಇರುವ ಚಿಕ್ಕದೇವರಾಜ ಸಾಗರ ಎಂಬ ಕಾಲುವೆಯ ಕೆಳಗಣ ಗದ್ದೆಗಳನ್ನು, ಕೆಲವು ತೋಟಗಳನ್ನು ಕೊಟ್ಟು ವರಹಾಮುದ್ರೆ ತಾಮ್ರ ಶಾಸನಗಳನ್ನು ಸಹ ಬರೆಸಿಕೊಟ್ಟು, ಸತ್ಕೀರ್ತಿಯನ್ನು ಪಡೆದು ಸುಖದಿಂದಿದ್ದರು.[45]

**ದೊಡ್ಡಕೃಷ್ಣರಾಜ ಒಡೆಯರು ಸ್ಥಾಪಿಸಿದ ಬ್ರಹ್ಮದಾಯ ಮತ್ತು ದೇವದಾಯಗಳು**

ಇವರು ತಮ್ಮ ಪೂರ್ವಿಕರು ಮಾಡಿದ ದೇವದಾಯ, ಬ್ರಹ್ಮದಾಯ, ಸತ್ರ ಮುಂತಾದ ಧರ್ಮಕಾರ್ಯಗಳನ್ನು ನಿರುಪಾಧಿಕ ಸರ್ವಮಾನ್ಯವಾಗಿ ನಡೆಸಿಕೊಂಡು ಬರುತ್ತಿದ್ದರು ಮತ್ತು ತಿರುಪತಿ ವೆಂಕಟರಮಣಸ್ವಾಮಿಯವರ ನಿತ್ಯ ಕಟ್ಟಳೆಯ ಸೇವೆಗಳೂ, ಬ್ರಹ್ಮೋತ್ಸವ ಮುಂತಾದ ವಿಶೇಷೋತ್ಸವಗಳೂ ಶಾಶ್ವತವಾಗಿ ನಡೆಯುವುದಕ್ಕೆ 'ಪರಮತಿ' ಎಂಬ ಗಡಿಗೆ ವಳಿತವಾದ ವೆಂಕಟಪುರ, ಆಯಂಪಾಳಗ್ರಾಮ, ದೊಡ್ಡಮರದೂರು, ಚಿಕ್ಕಮರದೂರು ಮುಂತಾದ 7 ಗ್ರಾಮಗಳಲ್ಲಿಯೂ ಹುಟ್ಟುವ ಕಂಠೀರಾಯಿ ಆರುನೂರು ವರಹಗಳನ್ನು ಶ್ರೀ ವೆಂಕಟರಮಣ ಸ್ವಾಮಿಯ ಕೈಂಕರ್ಯಕ್ಕೆ ಶಾಲಿವಾನ ಶಕ 1653 (1730 ಎ.ಡಿ) ನೇ ಸಾಧಾರಣ ಸಂ. ಮಾರ್ಗಶಿರ ಬಹುಳ 30 ಸೋಮವಾರ ಸೂರ್ಯೋಪರಾಗ ಪುಣ್ಯಕಾಲದಲ್ಲಿ ಹಿರಣ್ಯೋಧಕ ಧಾರಾಪೂರ್ವಕವಾಗಿ ಕೊಟ್ಟು, ಈ ಗ್ರಾಮಗಳಿಗೆ ಶಂಖಚಕ್ರಾಂಕಿತ ಶಿಲಾ ಪ್ರತಿಷ್ಟೆಯನ್ನು ಮಾಡಿಸಿ, ಈ ದೇವತಾ ಸೇವೆ ಸಾರೋದ್ಧಾರವಾಗಿ ನಡೆವುದಕ್ಕೆ ತಾಮ್ರ ಶಾಸನವನ್ನು ಬರೆಸಿ, ವೆಂಕಟಚಲಪತಿಯ ಭಂಡಾರಕ್ಕೆ ಒಪ್ಪಿಸಿದರು. ಇವರ ಮಾತೃಶ್ರೀಯವರಾದ ಚೆಲುವಾಜಮ್ಮಣ್ಣಿಯವರು ಅಪ್ಪಣೆ ಕೊಟ್ಟಂತೆ, ಅವರ ತವರುಮನೆಯ ಮನೆದೇವರಾದ ಕಳಲೆ ಲಕ್ಷ್ಮೀಕಾಂತಸ್ವಾಮಿಯವರ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿಸಿ ನೂತನವಾಗಿ ರಥವನ್ನು, ಮಂಟಪವನ್ನು ಕಟ್ಟಿಸಿ, ದೇವರುಗಳಿಗೆ ಗ್ರಾಮ ಭೂಮಿಗಳನ್ನು ಕೊಟ್ಟದಲ್ಲದೆ ಸ್ವನಾಮಾಂಕಿತವಾಗಿ ಕಳಲೆಯಲ್ಲಿ 'ಕೃಷ್ಣರಾಜಪುರ'ವೆಂಬ ಅಗ್ರಹಾರವನ್ನು ನಿರ್ಮಿಸಿ ಗೃಹಸಂಖ್ಯೆಯ 43 ವೃತ್ತಿಯೊಡನೆ ಗೃಹೋಪಕರಣ ಸಹಿತವಾಗಿ ತ್ರಿಮತಸ್ಥ ಬ್ರಾಹ್ಮಣರುಗಳಿಗೂ ಧಾರೆಯನ್ನೆರೆದು ಸೂರಹಳ್ಳಿ ಮುಂತಾದ ಗ್ರಾಮಗಳನ್ನು ಕೊಟ್ಟರು ಮತ್ತು ಇವರ ಹಿರಿಯ ಕುಟುಂಬ ದೇವಾಜಮ್ಮಣ್ಣಿಯವರು, ಚೆಲುವಾಜಮ್ಮಣ್ಣಿಯವರು ಇವರಿಬ್ಬರು ಅಗ್ರಹಾರವನ್ನು ಮಾಡಬೇಕೆಂದು ಭಿನ್ನವಿಸಿ ಕೊಂಡುದರಿಂದ, ತೆಣ್ಣೂರು ಸ್ಥಳದಲ್ಲಿ ಸ್ವನಾಮಾಂಕಿತವಾಗಿ ದೇವಸ್ಥಾನವನ್ನು ಕಟ್ಟಿಸಿ ಗೋಪಾಲಕೃಷ್ಣಸ್ವಾಮಿಯವರ ಪ್ರತಿಷ್ಟೆಯನ್ನು ಮಾಡಿಸಿ ತಮ್ಮ ಇಬ್ಬರು ಧರ್ಮಪತ್ನಿಯರ ಹೆಸರಿನಿಂದಲೂ, ಎರಡು ಅಗ್ರಹಾರಗಳನ್ನು ಮಾಡಿಸಿ, ಅಗ್ರಹಾರ 1ಕ್ಕೆ 24 ವೃತ್ತಿಯ ಮೇರೆಗೆ 48 ವೃತ್ತಿಗಳೊಡನೆ ತ್ರಿಮತಸ್ಥ

ಬ್ರಾಹ್ಮಣರುಗಳಿಗೆ ಗೃಹೋಪಕರಣ ಸಹಿತವಾಗಿ ಧಾರೆಯೆರೆದು ಕೊಟ್ಟು ದೇವಸ್ಥಾನಕ್ಕೆ ತಸದೀಕನ್ನುಂಟು ಮಾಡಿದರು. ಇದಲ್ಲದೆ ಇಲ್ಲಿಯ ಅನೇಕ ಪುಣ್ಯಸ್ಥಳಗಳಲ್ಲಿಯೂ ಕಣವೆಯ ಕೆಳಗಣ ಸ್ಥಳಗಳಲ್ಲಿಯೂ ಕೆಲವು ಅಗ್ರಹಾರಗಳನ್ನು ಮಾಡಿದುದಲ್ಲದೆ, ವಿಶೇಷ ಪುಣ್ಯಕಾಲಗಳಲ್ಲಿ 'ಗಜಾಶ್ವದಾನ', 'ಉಭಯತೋಮುಖದಾನ', 'ಆಂದೋಳಿಕಾದಾನ', 'ಕನ್ಯಾದಾನ', 'ಉಪನಯನದಾನ' 'ನಿತ್ಯದಾನ', ದಂಪತಿಪೂಜೆ ಇವುಗಳನ್ನು ಅನೇಕವಾಗಿ ಮಾಡಿದರು ಮತ್ತು ಮೇಲುಕೋಟೆಯಲ್ಲಿ ಸ್ವನಾಮಾಂಕಿತವಾಗಿಯೂ, ಮಾತೃಶ್ರೀ ಚೆಲುವಜಮ್ಮಣ್ಣಿಯವರ ನಾಮಾಂಕಿತವಾಗಿಯೂ ಕಲ್ಯಾಣಿಯ ಬಳಿಯಲ್ಲಿ ಕೆಲವು ಮಂಟಪಗಳನ್ನು ಆಳ್ವಾರ ಗುಡಿಯನ್ನು ಕಟ್ಟಿಸಿದರು.[46]

ಹೀಗೆಯೇ ವಿಜಯನಗರ ಅರಸರು ಮತ್ತು ಮೈಸೂರಿನ ಒಡೆಯರು ಬ್ರಹ್ಮದಾಯ ಮತ್ತು ದೇವದಾಯಗಳನ್ನು ಸರ್ವಮಾನ್ಯವಾಗಿ ಸ್ಥಾಪಿಸಿದ್ದರು. ಅಂದರೆ ಈ ಗ್ರಾಮಗಳ ಒಡೆಯರು ಅಥವಾ ಭೂಹಿಡುವಳಿಗಳ ಒಡೆಯರು ಸರಕಾರಕ್ಕೆ ಯಾವ ತೆರಿಗೆಗಳನ್ನು ನೀಡುತ್ತಿರಲಿಲ್ಲ. ಇದರಿಂದ ಸರ್ಕಾರಕ್ಕೆ ಬರುವ ಆದಾಯ ಒಂದು ರೀತಿಯಲ್ಲಿ ಕಡಿಮೆಯಾಯಿತ್ತೆಂದು ಹೇಳಬಹುದು. ಇದಲ್ಲದೆ ಸರ್ಕಾರ ಮತ್ತು ರೈತ ವರ್ಗದವರ ನಡುವೆ ಮಧ್ಯವರ್ತಿಗಳು ಏರ್ಪಡುವಂತಾಯಿತು. ಶ್ರೀರಂಗ ಪಟ್ಟಣ ಪ್ರದೇಶ ಹೆಚ್ಚು ಫಲವತ್ತಾಗಿತ್ತು ಮತ್ತು ಕೃಷಿಗೆ ಉತ್ತಮ ಭೂಮಿಯನ್ನು ಪಡೆದು ಕೊಂಡಿದ್ದರು. ಈ ದೃಷ್ಟಿಯಿಂದ ರಾಜರ ಈ ಧೋರಣೆ ಆರ್ಥಿಕ ದೃಷ್ಟಿಯಿಂದ ಕೆಲವು ನಕರಾತ್ಮಕ ವಾದ ಪರಿಣಾಮವನ್ನು ಬೀರಿದವೆಂದು ಹೇಳಬಹುದು. ಈಗ ನಾವು ಈ ಪ್ರದೇಶದ ತೆರಿಗೆ ವ್ಯವಸ್ಥೆ ಯನ್ನು ಪರಿಶೀಲಿಸಬಹುದು.

ಶ್ರೀರಂಗಪಟ್ಟಣ ಪ್ರದೇಶದ ಶಾಸನಗಳ ಅಧ್ಯಯನದಿಂದ ನಮಗೆ ಆ ಕಾಲದಲ್ಲಿ ಜನರು ನೀಡುತ್ತಿದ್ದ ಅನೇಕ ತೆರಿಗೆಗಳ ಹೆಸರುಗಳು ದೊರೆಯುತ್ತವೆ. ಅವುಗಳನ್ನು ಈ ಕೆಳಗೆ ಪಟ್ಟಿಮಾಡಿ ಕೊಡಬಹುದು.

## ತೆರಿಗೆಗಳು

| ಕ್ರ. ಸಂ | ತೆರಿಗೆಯ ಹೆಸರು | ಕಾಲ | ಆಕರ |
|---|---|---|---|
| 1 | ಅಡಿಕೆ ಸುಂಕ, ಮಗ್ಗ, ಕುಮಾರ ಕಾಣಿಕೆ, ಹೊರವಾರು, ಒಟ್ಟು ಸುಂಕ, ಬತ್ತ ವಿಕ್ರಯ | ಕ್ರಿ.ಶ. 1431 | ಎ.ಕ.6 (ಎನ್.ಎಸ್) ಶ್ರೀ.ಪ.3 |
| 2 | ಮಗ್ಗ, ಮನೆವಣ, ಸುವರ್ಣಾದಾಯ | ಕ್ರಿ.ಶ. 1528 | ಅದೇ ಶ್ರೀ ಪ.8 |
| 3 | ಅಡಿಕೆ ಸುಂಕ, ಬಳವಾರು, ಬೇಡಿಗೆ | ಕ್ರಿ.ಶ. 1564 | ಅದೇ ಶ್ರೀ ಪ.5 |
| 4 | ಕುರಿದೆರೆ, ಮನೆವಣ | ಕ್ರಿ.ಶ. 1565 | ಅದೇ ಶ್ರೀ ಪ.115 |
| 5 | ಅಷ್ಟಭೋಗ ತೇಜಸ್ವಾಮ್ಯ | ಕ್ರಿ.ಶ.1458 | ಅದೇ ಶ್ರೀ ಪ.93 |
| 6 | ಅಷ್ಟಭೋಗ ತ್ಯಾಜಸ್ವಾಮ್ಯ, ಸುವರ್ಣಾದಾಯ | ಕ್ರಿ.ಶ. 1630 | ಅದೇ ಶ್ರೀ ಪ.25 |
| 7 | ಮಗ್ಗ, ನೇಕಾರ ತೆರಿಗೆ | – | ಅದೇ ಶ್ರೀ.ಪ.104 |
| 8 | ಸುಂಕ | ಕ್ರಿ.ಶ. 1459 | ಅದೇ ಶ್ರೀ ಪ.36 |
| 9 | ಸುಂಕ, ಕಾಣಿಕೆ, ಕಂದಾಯ | – | ಅದೇ ಶ್ರೀ ಪ.45 |
| 10 | ಸೇನಭಾವ | – | ಅದೇ ಶ್ರೀ ಪ.27 |
| 11 | ಮಗ್ಗ, ಮನೆವಣ, ಕಾಣಿಕೆ, ಸುವರ್ಣಾದಾಯ | ಕ್ರಿ.ಶ. 1686 | ಅದೇ ಶ್ರೀ ಪ.24 |
| 12 | ಹೊಗೆ, ಹಣ, ಸುಂಕ | ಕ್ರಿ.ಶ.1664 | ಅದೇ ಶ್ರೀ ಪ.23 |
| 13 | ಸುಂಕ, ಅಲೆದೆರೆ, ಆಡುದೆರೆ | ಕ್ರಿ.ಶ. 1381 | ಅದೇ ಶ್ರೀ ಪ.76 |

ಚಿಕ್ಕದೇವರಾಜ ಒಡೆಯರು ಹಣಕಾಸಿನ ಆಡಳಿತದಲ್ಲಿ ಅನೇಕ ಸುಧಾರಣೆಗಳನ್ನು ಜಾರಿಗೆ ತಂದರು. ಅವುಗಳನ್ನು ಇಲ್ಲಿ ಪ್ರಸ್ತಾಪಿಸಬಹುದು.

ರಾಜ ಒಡೆಯರು ಮೊದಲಾಗಿ ತಾವು ಸಾಧಿಸಿದ ಸೀಮೆಗಳನ್ನು ಒಟ್ಟು ಸೇರಿಸಿ ಕೆಲವರಿಗೆ ಉಂಬಳಿಕೊಟ್ಟು, ಕೆಲವರಿಗೆ ಖಂಡಣೆಯನ್ನು ನಿಗದಿ ಮಾಡಿರುವುದಲ್ಲದೆ, ನಿಂತ ಗಂಡಿಗಳಲ್ಲಿ ಸಣ್ಣದಾಗಿದ್ದುದನ್ನು ಸಮೀಪದಲ್ಲಿರುವ ಗಡಿಗೆ ಸೇರಿಸಿ ದೊಡ್ಡದು ಮಾಡಿ ಮೈಸೂರು ಸಂಸ್ಥಾನದ ಗಡಿಗಳು ಒಟ್ಟು 84 ಎಂಬುದಾಗಿಯೂ, ಈ ಗಡಿಗಳಲ್ಲಿರುವ ಸಣ್ಣಸಣ್ಣ ಗ್ರಾಮಗಳನ್ನು 8,10,12,16

ರವರೆಗೂ ದೊಡ್ಡ ಗ್ರಾಮಗಳಿಗೆ ಸೇರಿಸಿ ದೊಡ್ಡ ಗ್ರಾಮದ ಹೆಸರಿನಿಂದ ಹೋಬಳಿ ಎಂಬುದಾಗಿಯೂ ನಿಬಂಧನೆ ಮಾಡಿದರೆಂದು[47] ತಿಳಿಯುತ್ತದೆ.

ಗಡಿಯೊಂದಕ್ಕೆ ಸುಬೇದಾರ 1, ಚಿಕ್ಕಪಾರುಪತ್ಯಗಾರ 1, ಅರವಣಿಗೆ ಪ್ರತಿ 3, ಗುಮಾಸ್ತೆಯರು 6, ರಾಯಸದವನು 1, ಕಾಗದ ಪತ್ರಗಳನ್ನು ಸಾಗಿಸುವುದಕ್ಕೂ ಕಂಡು ಕೇಳಿದ ವರ್ತಮಾನವನ್ನು ಬರೆವುದಕ್ಕೂ, ಅಂಚೆ ಹರಿಕಾರ 1, ಈ ಕೋಲುಕಾರ ಜನಗಳು, ಗಡಿಗಳ ತಾರತಮ್ಯವಿದ್ದಂತೆ ದಫೇದಾರ ಸಹಿತ ಕಾಲೂಳಿಗದ ಜನರು, ಹಸ್ತಾಂತ್ರ 1, ಗೊಲ್ಲ 1, ಚಾವಡಿಯ ಕಾವಲುಗಾರ 2, ಕೈ ದೀವಟಿಗೆಯ ಜನ 1, ಗಡಿಗಳಲ್ಲಿ ಪಾಳೆಯಗಾರರು, ಕಳ್ಳಕಾಕರು ಮುಂತಾದ ಜನಗಳಿಗೆ ಆಸ್ಪದವಾಗದಂತೆಯೂ, ಚಾವಡಿ ಮುಂತಾದ ಸ್ಥಳಗಳಲ್ಲಿ ಹಸ್ತಾಂತ್ರದ ಕಾವಲು ಕಟ್ಟಳೆ ನಡೆವಂತೆಯೂ ಬಂದೂಬಸ್ತಾಗಿರಲು ಗಡಿಯೊಂದಕ್ಕೆ ಕಂದಾಚಾರಕ್ಕೆ ಠಾಣೆದಾರ 1, ಆಳು ಗುರಿಕಾರ 1, ಶಿರಸ್ತೆದಾರ 3, ಗುಮಾಸ್ತೆಯರು 3, ಹೋಬಳಿದಾರ, ಧಫೇದಾರ, ಓಲೆಕಾರ, ಕೊಂಬಿನವನು, ತಮಟೆಯವನು ಮುಂತಾದ ಜನಗಳನ್ನು ನೇಮಕಮಾಡಿ, ಗಡಿಗಳ ವಿಧವರಿತು 100, 200, 300, 400 ಜನದವರೆಗೂ ಓಲೆಕಾರರನ್ನು ಈ ಓಲೆಕಾರರು 6 ಮಂದಿಗೆ ಒಬ್ಬ ದಫೇದಾರನೆಂಬುದಾಗಿಯೂ 50 ಜನಕ್ಕೆ ಒಬ್ಬ ಹೋಬಳಿದಾರನೆಂಬುದಾಗಿಯೂ ನೇಮಕಮಾಡಿ, ಕಾರ್ಯಬಿದ್ದ ವೇಳೆಯಲ್ಲಿ ಯುದ್ಧ ಮಾಡುವುದಕ್ಕೆ ಮದ್ದುಗುಂಡು ಮುಂತಾದ ಸಾಮಗ್ರಿಗಳನ್ನು ಸಿದ್ಧಮಾಡಿರುವಂತೆ ಕಟ್ಟಳೆಯನ್ನು ಮಾಡಿಸಿದರು.[48] ಇದಲ್ಲದೆ ಗಡಿಗಳಲ್ಲಿ ಅರಮನೆಗೆ ಹೇರಳವಾಗಿ ಕೂಡಿಬರುವಂತೆ ಪೈರುಪಚ್ಚೆ ಗಳನ್ನು ಮಾಡಿಸತಕ್ಕ ಬುದ್ಧಿವಂತನಾದ ಸುಭೇದಾರರನ್ನೂ, ಹಣಕಾಸು, ದವಸಧಾನ್ಯ ಮುಂತಾದವು ಗಳ ಲೆಕ್ಕ ಬರೆವುದರಲ್ಲಿ ನಿರ್ವಂಚನೆಯಾಗಿ ನಡೆದುಕೊಳ್ಳುವ ಶಿರಸ್ತೆದಾರ, ಗುಮಾಸ್ತರುಗಳನ್ನೂ, ರಾಯಸದವರು ಮುಂತಾದ ಅರವಣೆ ಪಣಕಟ್ಟಿನ ಜನಗಳನ್ನೂ, ಕಂದಾಚಾರಕ್ಕೆ ಕಿಲ್ಲೆದಾರ, ಠಾಣೆದಾರ, ಮೊದಲಾದವರನ್ನು ನೇಮಿಸಿ ಇವರು ಕಾವಲು ಕಟ್ಟಳೆ ಮುಂತಾದ ಕೆಲಸಗಳಲ್ಲಿ ಸುಬೇ ದಾರನು ಹೇಳಿದ ಹಾಗೆ ಕೇಳುವಂತೆಯೂ, ಈ ಅಧಿಕಾರಿಗಳಲ್ಲೂ ಬುದ್ಧಿವಂತರಾಗಿರುವ ಜನರ ಬುದ್ಧಿಯನ್ನು ಪರೀಕ್ಷಿಸಿ ನಿರ್ವಂಚನೆಯಿಂದ ನಡೆದುಕೊಳ್ಳುವಂತೆಯೂ ನೇಮಕಮಾಡಿ ಸುಬೇದಾರ, ಶಿರಸ್ತೆದಾರ, ಕಿಲ್ಲೆದಾರ ಮುಂತಾದವರಿಗೆ ಅವರವರ ಕೆಲಸವನ್ನರಿತು ಸಂಬಳವನ್ನು ನಿಷ್ಕರ್ಷಿಸಿ, ಆ ಸಂಬಳಕ್ಕೆ ಅರ್ಧ ನಗದು, ಅರ್ಧ ಬತ್ತ ಈ ಮೇರೆಗೆ ಕೊಡುವಂತೆ ಗೊತ್ತುಮಾಡಿ ಕಂದಾಚಾರದ ಓಲೆಕಾರ ಜನಗಳಿಗೆ ತಿಂಗಳೊಂದಕ್ಕೆ ಅರ್ಧ ವರಹ, ಅರ್ಧ ವರಹವೂ ಒಂದು ಹಣ, ಒಂದು ವರಹದವರೆಗೂ ಸಂಬಳವನ್ನು ನೇಮಕಮಾಡಿ ಈ ಸಂಬಳಕ್ಕೆ ಅರ್ಧ ನಗದು ಅರ್ಧ ಭೂಮಿ

ಯನ್ನು ಕೊಡುವಂತೆಯೂ, ಈ ಜನಗಳು ಅರಮನೆ ಹಿಟ್ಟುಬಿಟ್ಟು ಕಾಣಿಕೆ ಕಡ್ಡಾಯ ಮಸಿದೆರೆಗೆ ಮುಂತಾದ ಬಾಬುಗಳನ್ನು ಕೊಡ ಕೆಲಸವಿಲ್ಲ ಎಂಬುದಾಗಿಯೂ, ಇದಲ್ಲದೆ ಸೀಮೆಗಳಲ್ಲಿ ಜನರ ನಡತೆಯನ್ನೂ ಮತ್ತು ಗಡಿಗಳಲ್ಲಿಯೂ, ಮಾರ್ಗಗಳಲ್ಲಿಯೂ, ಕಳ್ಳಕಾಕರು ಮುಂತಾದ ಜನಗಳಿಂದ ಹೆಚ್ಚು ಕಡಿಮೆ ನಡೆದ ವರ್ತಮಾನಗಳನ್ನು ತಮಗೆ ತಿಳಿಸುವಂತೆ ಕಟ್ಟಳೆ ಮಾಡಿದ್ದರು.[49] ಅಷ್ಟ ಗ್ರಾಮ ಮುಂತಾದ್ದಕ್ಕೆ ಸೇರಿದ ನದಿ, ಕಟ್ಟೆ, ಕಾಲುವೆಗಳ ಕೆಳಗೆ ಕಬ್ಬು, ಬತ್ತ ಮುಂತಾದ ಬೆಳೆಗಳನ್ನು ಬೆಳೆದು ಅರಮನೆಗೆ ಅರ್ಧ ವಾರವನ್ನು ಕೊಡುವಂತೆ ನಿಬಂಧನೆ ಮಾಡಿದರು. ಇದಕ್ಕೆ ಪ್ರಜೆಗಳು ಅರಮನೆಗೆ ಅರ್ಧ ವಾರವನ್ನು ಕೊಟ್ಟರೆ ತಮಗೆ ಮುಟ್ಟುವಳಿ ಕಳೆದು ಜೀವನ ನಡೆಸುವುದಕ್ಕೆ ಸಾಧ್ಯವಿಲ್ಲ ಎಂಬುದಾಗಿ ಭಿನ್ನವಿಸಿಕೊಳ್ಳಲು ದೊರೆಗಳವರು ಒಂದು ವರ್ಷ ಆದ ಫಸಲನ್ನು ರೇಖೆ ಮಾಡಿಸಿ ರೈತರ ಮುಟ್ಟುವಳಿಯನ್ನು ವಿಚಾರಿಸಿ ನೋಡುವಲ್ಲಿ ಹುಟ್ಟುವಳಿ ಮುಟ್ಟುವಳಿ ಸಮವಾಗಿದ್ದುದರಿಂದ ಆದ ಫಲವನ್ನು ಮೂರು ಪಾಲುಮಾಡಿ, ಒಂದು ಪಾಲನ್ನು ಅವರ ಮುಟ್ಟುವಳಿಗೂ, ಒಂದು ಪಾಲನ್ನು ಅವರ ಜೀವನಕ್ಕೂ ಬಿಟ್ಟು ಇನ್ನೊಂದು ಪಾಲನ್ನು ಅರಮನೆಗೆ ಕೊಡುವಂತೆಯೂ, ಈ ಮೇರೆಗೆ ಒಂದೆರಡು ವರ್ಷ ನಡೆಸಿ ಮುಂದೆ ಸಮವಾರ ಕೊಡುವಂತೆ ನಿಬಂಧನೆ ಮಾಡಿದರು. ಕೆರೆಯ ಕೆಳಗೆ ನೀರು ಬಂದ ವರ್ಷದಲ್ಲಿ ಬತ್ತ ಮುಂತಾದ ಬೆಳಸುಗಳನ್ನು ಮಾಡಿ ಅರ್ಧವನ್ನು ಅರಮನೆಗೆ ವಾರ ಕೊಡುವಂತೆಯೂ, ನೀರು ಬಾರದ ವರ್ಷ ಆ ಭೂಮಿಯಲ್ಲಿ ಬೆದ್ದಲು ಬೆಳೆ ಮಾಡಿಕೊಂಡು ನಿಬಂಧನೆಯ ಮೇರೆಗೆ ಅರಮನೆಗೆ ಬೆದ್ದಲು ಕಂದಾಯವನ್ನು ಕೊಡುವಂತೆಯೂ ನಿಷ್ಕರ್ಷೆ ಮಾಡಿದ್ದರು.[50] ಈ ಕಟ್ಟೆ ಕಾಲುವೆಗಳ ನೀರನ್ನು ಸರಾಗವಾಗಿ ತಂದು ಬೆಳೆಯನ್ನು ಮಾಡುವುದಕ್ಕೆ ಕಾಲುವೆಯ ಮಣೇಗಾರ 1, ಶ್ಯಾನಭಾಗ 1, ಕಾಲೂಳಿಗದವನು, ನೀರುಗಂಟಿ ಇವರನ್ನು ಕಾಲುವೆ ಮುನಾಸಬ್ ಇದ್ದಂತೆ ಗ್ರಾಮಗಳ ಹಂತವಾರು ಮೇರೆಗೆ 2,3,4 ಜನರನ್ನೂ ಅರಮನೆಯ ವಾರ ಬೆಳೆಗಳನ್ನು ರೇಖೆ ಮಾಡುವುದಕ್ಕೆ ಹಸುಗೆ ಮಣೆಗಾರ 1, ಹಸುಗೆ ಶ್ಯಾನುಭಾಗ 1, ಕಾಲೂಳಿಗದ ಜನ ಮುಂತಾದವರನ್ನೂ ನೇಮಕ ಮಾಡಿದರು.[51]

ಚಿಲ್ಲರೆ ಗ್ರಾಮ 1ಕ್ಕೆ ಗೌಡ 1, ಶ್ಯಾನುಭಾಗ 1,2,3 ಪಂಚಾಂಗ ಬ್ರಾಹ್ಮಣ 1, ಕಬ್ಬಿಣದ ಕೆಲಸದವನು 1, ಅಕ್ಕಸಾಲೆ 1, ಕುಂಬಾರ 1, ಅಗಸ 1, ಕೆಲಸಿ 1, ತೋಟಿ 1, ತಳವಾರ 1, ಕೆರೆ ನೀರು ಗಂಟಿ 1, ಓಜರವನು 1, ಈ ಮೇರೆಗೆ ಬಾರಾಬಲೂತಿ ಎಂಬುದಾಗಿ ನಿಷ್ಕರ್ಷೆ ಮಾಡಿ, ಈ 12 ಜನಕ್ಕೂ ಅವರವರ ಮನಾಸಬು ಇದ್ದಂತೆ, ಕೋರಿನ ದವಸದಲ್ಲಿ ಸೊಲಗೆಗುಡ್ಡೆ ಆಯ

ಎಂಬುದಾಗಿ ರುಸುಂ ಮಾಡಿಕೊಟ್ಟು, ಗೌಡ ಮತ್ತು ಶ್ಯಾನುಭಾಗರಿಗೆ ಶಾಸಾಯ ಮುದ್ರೆ ಎಂಬುದಾಗಿ ಕೊಡುವಂತೆ ನೇಮಕ ಮಾಡಿಸಿದ್ದಲ್ಲದೆ, ಗ್ರಾಮಕ್ಕೆ ಒಬ್ಬ ಗೌಡನಿಗೆ ಮಾತ್ರ ಮನೆ ತೆರಿಗೆ, ಹಿಟ್ಟು ಬಿಟ್ಟು ಕಾಣಿಕೆ ಕಡ್ಡಾಯ ಮುಂತಾದ್ದನ್ನು ಬಿಟ್ಟುಕೊಡುವಂತೆ ನಿಬಂಧನೆಯನ್ನು ಮಾಡಿದರು.[52] ಇದಲ್ಲದೆ ಶ್ಯಾನಭಾಗನ ಸಂಬಳಕ್ಕೆ ಅರ್ಧ ಭೂಮಿ ಅರ್ಧ ಸಂಬಳವನ್ನು ಮತ್ತು ರೈತರುಗಳಿಂದ ಪ್ರತಿ ವರ್ಷದಲ್ಲಿ ಕುಳ 1ಕ್ಕೆ 1,2,3, 1 ಹಣದವರೆಗೆ ಕುಳದ ಮನಾಸಬು ಇದ್ದಂತೆ ಕಡತದ ಕಾಣೀಕೆಯ ಹಣವೆಂದು ಕೊಡುವಂತೆ ನೇಮಕ ಮಾಡಿದರು.

ಓಜ, ಕೆಲಸಿ, ಕುಂಬಾರ, ಅಗಸ, ತೋಟಿ, ಕಬ್ಬಿಣ ಕೆಲಸದವ, ತಳವಾರ ಮುಂತಾದ ಆಯಾ ಸ್ವಾಮ್ಯದ ಜನಗಳಿಗೆ ರೈತರ ಕಡೆಯಿಂದ ತೆನೆ ಸಹಿತವಾದ ಹೊರೆ ಹುಲ್ಲನ್ನು, ಕಣದಲ್ಲಿ 1 ಕೊಳಗದ ದವಸವನ್ನು ಕೊಡುವಂತೆಯೂ, ರೈತರ ಮನೆಗಳಲ್ಲಿರುವ ಜನರುಗಳ ಸುಮಾರು ಮೇರೆಗೆ ತೋಟಿ, ತಳವಾರ ಹೊರತು ಮಿಗಿಲಾದ ಜನಗಳಿಗೆ ಹಡದೆಯನ್ನು ನಿಬಂಧನದ ಮೇರೆಗೆ ಕೊಡುವಂತೆ ನೇಮಕ ಮಾಡಿಸಿದಲ್ಲದೆ, ಪಂಚಾಂಗದ ಬ್ರಾಹ್ಮಣ, ಶ್ಯಾನುಭಾಗ, ತೋಟಿ, ತಳವಾರ, ನೀರುಗಂಟಿ, ಈ 5 ಜನಗಳಿಗೆ ಜೀವನಾರ್ಥವಾಗಿ ಅವರವರ ತಾರತಮ್ಯವಿದ್ದಂತೆ 1 ವರಹದಿಂದ 6 ವರಹದವರೆಗೂ ಮಾನ್ಯವಾಗಿ ಭೂಮಿಯನ್ನು ಕೊಟ್ಟರು. ಇವರಲ್ಲದೆ ಕಾಲುವೆ ಮಣೆಗಾರ, ಹಸುಗೆ ಮಣೆಗಾರ, ಶ್ಯಾನುಭಾಗ ಮುಂತಾದ ಜನಗಳಿಗೂ ಮೇಲೆ ಕಂಡಂತೆ 1 ಹೊರೆ ಹುಲ್ಲನ್ನು 1 ಕೊಳಗದ ದವಸವನ್ನು ಸಹ ವಾರದ ಹುಟ್ಟುವಳಿಯಲ್ಲಿ ಕೊಡುವಂತೆ ನೇಮಿಸಿದರು. ಮಿಗಿಲಾದ ಪಣಕಟ್ಟಿನ ಜನಗಳು ಬಣ್ಣಗಾರ, ದೇವಾಂಗ, ಚಿಪ್ಪಿಗ, ಕಾಮಾಟಿ, ಗಾರೆ ಕೆಲಸದವನು, ಶಿಲ್ಪಿ ಈ 6 ಮಂದಿ ಅಲ್ಲದೆ ಮೇದರ ಮುಂತಾದ ಜನಗಳು ತಮ್ಮ ತಮ್ಮ ಕುಲಪದ್ಧತಿಯ ಮೇರೆಗೆ ಬುದ್ಧಿ ಕುಶಲತೆಗೆ ತಕ್ಕ ಉದ್ಯೋಗಗಳಿಂದ ಜೀವನ ಮಾಡುವಂತೆ ನಿಬಂಧನೆ ಮಾಡಿದರು.[53] ಅನಂತರ ಸೀಮೆಯಲ್ಲಿ ದವಸಗಳನ್ನು ಅಳೆವ ಕೊಳಗ 1ಕ್ಕೆ ಆಯಾ ಸೀಮೆಯ ಪದ್ಧತಿಯ ಮೇರೆಗೆ 8,12,15,16 ಸೇರು ಇದ್ದುದರಿಂದ ಅದೇ ಮೇರೆಗೆ 84 ಗಡಿಗಳಲ್ಲಿಯೂ ನಡೆವಂತೆ ಕಟ್ಟಿ ಮಾಡಿಸಿದರು. ಅನಂತರ ಈ 84 ಗಡಿಗಳಿಂದಲೂ ಪೂರ್ವದಲ್ಲಿ ಪಾಳೆಯಗಾರರ ಕಾಲದಲ್ಲಿದ್ದ ಮುದ್ರೆಯ ಉಂಗುರಗಳನ್ನು ತರಿಸಿ, ಪರಾಂಬರಿಸುವಲ್ಲಿ, ಒಂದೊಂದು ಗಡಿಯಲ್ಲಿ ಒಂದೊಂದು ಪ್ರಕಾರ ಇದ್ದುದರಿಂದ ಇನ್ನು ಮೇಲೆ ಹಾಗೆ ಇರಕೂಡದೆಂದು ಪರ್ಯಾಲೋಚಿಸಿ, ಆಯಾ ಗಡಿಗಳ ಹೆಸರನ್ನು ನಡುವೆ 'ದೇ' ಎಂಬ ಅಕ್ಷರದ ಉಂಗುರವು ಸುಬೇದಾರನ ಕೈಯಲ್ಲಿರುವಂತೆ ಕಟ್ಟಳೆ ಮಾಡಿದರು. ಅಲ್ಲದೆ ಅಠವಣೆ, ಚಿಕ್ಕ ಪಾರುಪತ್ಯಗಾರ, ಕಿಲ್ಲೆದಾರರುಗಳಿಗೂ, ಗಡಿಗಳಿಗೆ ಸೇರಿರುವ

ಹೋಬಳಿಗಳಿಗೂ, ಗ್ರಾಮಗಳಿಗೂ, ಸುಂಕ, ಪೊಮ್ಮು ಸಮಯಚಾರ ಮುಂತಾದ ಎಲ್ಲಾ ಪಣಕಟ್ಟಿನ ಗೊತ್ತುಗಾರ ಜನಗಳಿಗೂ 'ದೇ' ಎಂಬ ಒಂದೇ ಅಕ್ಷರವನ್ನು ಕೆತ್ತಿರುವ ಬೆಳ್ಳಿಯ ಉಂಗುರಗಳನ್ನು ಮಾಡಿಸಿಕೊಟ್ಟರು. ಇದಲ್ಲದೆ ಕೋಟಿ, ತಳವಾರ, ನೀರುಗಂಬಿ ಈ ಜನಗಳು ಅರಮನೆಯ ಅಪ್ಪಣೆ ಯನ್ನು ಮೀರಿ ನಡೆದ ಜನಗಳ ಮನೆಗೂ, ದವಸದ ರಾಶಿಗಳಿಗೂ, ಮುದ್ರೆಯನ್ನು ಹಾಕಲು ಮರದ ಹಲಗೆಯನ್ನು ಮಾಡಿಸಿ, ಆಚೆ ಈಚೆ ಸೂರ್ಯ ಚಂದ್ರರನ್ನು ನಡುವೆ 'ದೇ' ಎಂಬ ಅಕ್ಷರವನ್ನು ಕೆತ್ತಿದ ಮುದ್ರೆಯ ಕೋಲನ್ನು ಗ್ರಾಮಗಳ ಚಾವಡಿಯಲ್ಲಿ ಇರಿಸಿದ್ದು, ಗ್ರಾಮದ ಪಾರುಪತ್ಯಗಾರ ಹೇಳಿದಾಗ ತೆಗೆದುಕೊಂಡು ಹೋಗಿ, ಮುದ್ರೆಯನ್ನು ಹಾಕುವಂತೆ ನಿಬಂಧನೆ ಮಾಡಿದರು. ಗಡಿಗಳಲ್ಲಿರುವ ದೇವಸ್ಥಾನಗಳಲ್ಲಿಯೂ ಆಯಾ ದೇವರ ಹೆಸರಿನ ಅಕ್ಷರಗಳನ್ನು ಕೆತ್ತಿದ ಮುದ್ರೆಯು ದೇವಸ್ಥಾನದ ಪಾರುಪತ್ಯಗಾರನ ಕೈಯಲ್ಲಿ ಇರುವಂತೆ ಕಟ್ಟಳೆಯನ್ನು ಮಾಡಿದರು.

ಅನಂತರ 84 ಗಡಿಗಳಲ್ಲಿ ಮಣ, ದಡೆಯ, ಪಂಚೇರು, ಕೊಳಗ, ಬಳ್ಳ, ಸೇರು, ಅರ್ಧ ಸೇರು, ಪಾವು, ಅರೆಪಾವು, ಚಟಾಕು, ಮುಂತಾದ ಪಕ್ಕಾ ಕಚ್ಚಾ ಅಳತೆಯ ಪಾತ್ರೆಗಳಿಗೆ ಮೇಲೆ ಹೇಳಿದ ಮೇರೆಗೆ ಮುದ್ರೆಯನ್ನು ಕೆತ್ತಿಸಿ ಪೇಟೆ ಮನೆಗಳಲ್ಲಿ ಮಾರುವುದನ್ನು ಕೊಳ್ಳುವುದನ್ನು ಈ ಮುದ್ರೆ ಹಾಕಿದ ಪಾತ್ರೆಗಳಿಂದಲೇ ನಡೆಸುವಂತೆ ಕಟ್ಟಳೆ ಮಾಡಿಸಿದರು.

ಕಂಠೀರಾಯಿ 3 ವರಹ ತೂಕಕ್ಕೆ ಒಂದು ದುಡ್ಡು ತೂಕ, ಒಂದು ದುಡ್ಡು ತೂಕಕ್ಕೆ ಒಂದು ತೊಲ, 24 ದುಡ್ಡು ತೂಕಕ್ಕೆ ಕಚ್ಚಾ ಒಂದು ಸೇರು, ಹತ್ತು ಸೇರು ತೂಕಕ್ಕೆ ಒಂದು ದಡೆಯ, ಇಂಥಾ ದಡೆಯ ನಾಲ್ಕಾದರೆ ಒಂದು ಚಿಕ್ಕ ಮಣ, ದೊಡ್ಡ ಹಾಳಿತದ ಒಂದು ಮಣದ ತೂಕಕ್ಕೆ 44–46 ಸೇರು ಈ ಮೇರೆಗೆ ಗೊತ್ತು ಮಾಡಿ ಇದರಿಂದ ತೂಕ ಮಾಡತಕ್ಕ ಜಿನಸುಗಳು, ಬೆಲ್ಲ, ಅಡಕೆ, ಅರಿಸಿನ, ಮೆಣಸು, ಮೆಣಸಿನಕಾಯಿ, ಗಂದಿಗರ ಅಂಗಡಿಯ ಕಿರಾಣಿ ಜನಸು ಮುಂತಾದ ಪದಾರ್ಥಗಳನ್ನು ಅರಮನೆಗೆ ದೊಡ್ಡ ಹಾಳಿತದಿಂದ ತೆಗೆದುಕೊಂಡು ಚಿಕ್ಕ ಹಾಳಿತದಿಂದ ವೆಚ್ಚ ಮಾಡುವಂತೆಯೂ ಪೇಟೆ ಮನೆಗಳಲ್ಲಿಯೂ ಇದೇ ಮೇರೆಗೆ ವ್ಯಾಪಾರ ಮಾಡುವಂತೆಯೂ ನಿಬಂಧನೆ ಮಾಡಿದರು.

ಅನಂತರ ಗಿಡಗೆಂಡೆ ಕಟ್ಟಿರುವ ಭೂಮಿಗೆ ಆಯಾ ಸೀಮೆಯ ಪದ್ಧತಿ ಪ್ರಕಾರ ಪೂರ್ವದಲ್ಲಿ ಶ್ಯಾನುಭಾಗನ ಲೆಕ್ಕದ ಮೇರೆಗೆ 12 ಹಣ ಹುಟ್ಟುವ ಉತ್ತಮ ಭೂಮಿಯಲ್ಲಿ ಗಿಡಗೆಂಡೆಯನ್ನು

ಕಡಿದು ರೈತರು ಸಾಗುವಳಿ ಮಾಡಿದರೆ 5 ವರ್ಷದವರೆಗೂ ಮೂರರಲ್ಲಿ ಒಂದು ಪಾಲು ಕಂದಾಯ ತೆಗೆದುಕೊಳ್ಳುವಂತೆಯೂ, ಇದೇ ಮೇರೆಗೆ ಇರುವ 16 ಹಣ ಹುಟ್ಟುವ ಮಧ್ಯಮ ಭೂಮಿಗೆ ನಾಲ್ಕರಲ್ಲಿ ಒಂದು ಪಾಲು 4 ಹಣವನ್ನು ಕಂದಾಯ ತೆಗೆದುಕೊಂಡು ಅನಂತರ ಅರಮನೆಗೆ ಪದ್ಧತಿಯ ಮೇರೆಗೆ ನಿಜ ಕಂದಾಯವನ್ನು ತೆಗೆದುಕೊಳ್ಳುವಂತೆಯೂ ನಿಬಂಧನೆ ಮಾಡಿದರು. ಕೆಲವು ಸೀಮೆಗಳಲ್ಲಿ ರೈತರು ಕಡಿಮೆಯಾಗಿ ಗಿಡಗೆಂಡೆ ಕಟ್ಟಿರುವ ಭೂಮಿಯು ಹೆಚ್ಚಾಗಿರುವುದರಿಂದ ಸಾಗುವಳಿಯಾಗುವುದಕ್ಕೆ ರೈತರಿಗೆ ಹಿಸ್ಸೆ ಕಂದಾಯವೆಂಬುದಾಗಿ ನೇಮಕ ಮಾಡಿಕೊಟ್ಟರು.[54]

ತೋಟಗಳಲ್ಲಿರುವ 1000 ತೆಂಗಿನ ಮರಗಳಿಗೆ 30, 28, 25, 18, 15 ವರಹಗಳ ಮೇರೆಗೆ ಆಯಾ ತೋಟದ ಫಲಗಳನ್ನು ನೋಡಿ ಕಂದಾಯವನ್ನು ಹಾಕಿದ್ದಲ್ಲದೆ ಕೆಲವು ಸೀಮೆಗಳಲ್ಲಿ ತೋಟಕ್ಕೆ ಪೂರ್ವದಿಂದಲೂ ಕಂದಾಯದ ಪದ್ಧತಿ ಇಲ್ಲದ್ದರಿಂದ, ಅದಕ್ಕೆ ತೆಂಗಿನಲ್ಲಿ ಆದ ಫಲಕ್ಕೆ ವಾರವನ್ನು ತೆಗೆದುಕೊಳ್ಳುವಂತೆಯೂ, ತೆಂಗಿನಮರಕ್ಕೆ ಕಂದಾಯ ಕೊಡುವ ಪದ್ಧತಿ ಇರುವ ಸೀಮೆಗಳಲ್ಲಿ ಅಡಕೆ ಮರಕ್ಕೂ ಆಯಾ ಸೀಮೆಯ ಪದ್ಧತಿಯ ಮೇಲೆ ಕಂದಾಯವನ್ನು ಕೊಡುವಂತೆಯೂ ಕಟ್ಟಳೆ ಮಾಡಿದರು. ಕೆರೆ ಕಾಲುವೆಗಳ ಸಮೀಪದಲ್ಲಿ ಹೊಸದಾಗಿ ಅಡಿಕೆ, ತೆಂಗು, ತೋಟವನ್ನು ಮಾಡಲು ರೈತರಿಗೆ ಸಾಗುವಳಿಗೆ ಕೊಡಬೇಕಾದರೆ, 100 ಬಾಳೆಯ ಬುಡಕ್ಕೆ 3 ಹಣವನ್ನು ಕಂದಾಯದ ಮೇರೆಗೆ ತೆಗೆದುಕೊಂಡು ಅಡಿಕೆ, ತೆಂಗು ಫಲಕ್ಕೆ ಬಂದ ಮೇಲೆ ಬಾಳೆಯ ಕಂದಾಯವನ್ನು ಬಿಟ್ಟುಕೊಟ್ಟು ಅಡಿಕೆ, ತೆಂಗಿಗೆ ಮಾತ್ರೆ ಆಯಾ ಸೀಮೆಯ ಪದ್ಧತಿಯ ಮೇರೆಗೆ ವಾರವನ್ನಾಗಲಿ, ಕಂದಾಯವನ್ನಾಗಲಿ ತೆಗೆದುಕೊಳ್ಳುವಂತೆ ನಿಬಂಧನೆ ಮಾಡಿದರು. ಹೊಲದಲ್ಲಿರುವ ಹುಣಸೆ, ಹಲಸಿನ ಮರಗಳಿಗೆ ಮಾತ್ರ ಫಲವಿದ್ದಂತೆ 1 ಹಣದಿಂದ 2 ಹಣದವರೆಗೆ ಮರವಳಿ ಕಂದಾಯವನ್ನು ನಿಷ್ಕರ್ಷೆ ಮಾಡಿದರು.[55] ಸೀಮೆಯಲ್ಲಿ ಕೆಲವು ಭೂಮಿಗಳಿಗೆ ರೈತರು ಕಂದಾಯವನ್ನು ಕೊಡಲು ಹಿಂಜರಿದಿದ್ದರಿಂದ ಅಂತಹ ರೈತರಿಗೆ ಚಿಕ್ಕ ದೇವರಾಜ ಒಡೆಯರವರು ಅವರ ಮೇಲೆ ಕರುಣೆ ಇಟ್ಟು, ವಾರವನ್ನು ತೆಗೆದುಕೊಳ್ಳುವಂತೆ ನೇಮಿಸಿ ವಾರದಲ್ಲಿ ಸ್ವಲ್ಪ ಭಾಗವನ್ನು ದವಸದ ರೂಪದಲ್ಲಿ ಶ್ರೀರಂಗಪಟ್ಟಣದ ದೊಡ್ಡ ಉಗ್ರಾಣಕ್ಕೆ ತಂದು ಹಾಕಬೇಕೆಂದು ಹಾಗೂ ಅದರ ಹುಲ್ಲನ್ನು ಶ್ರೀರಂಗಪಟ್ಟಣದ ಹುಲ್ಲು ಮೆದೆಗೆ ತಂದು ಹಾಕಬೇಕೆಂದು ನಿಬಂಧನೆ ಮಾಡಿದರೆಂದು ತಿಳಿಯುತ್ತದೆ.

ಇದರಿಂದ ಸಕಲ ವಿಷಯದಲ್ಲಿಯೂ ಸರಾಗ ಮಾಡಿಕೊಟ್ಟಿದ್ದರಿಂದ ಕೆಲವು ರೈತರು ಧನ ಧಾನ್ಯದಿಂದ ಗರ್ವಿತರಾಗಿ "ಅರಮನೆಗೆ ಕೊಡತಕ್ಕ ಕಂದಾಯ, ವಾರದ ದವಸ ಮುಂತಾದುದನ್ನು

ಕೊಡುವುದಿಲ್ಲ, ಕಾಡ ಭೂಮಿಯನ್ನು ಬಸವಣ್ಣನು ಉಳುತ್ತಾನೆ, ದೇವೇಂದ್ರನು ಮಳೆಗರೆಯುತ್ತಾನೆ ನಾವು ಕಷ್ಟಪಟ್ಟು ಬೆಳೆ ಮಾಡಿ ನಿಮಗೇಕೆ ಕೊಡಬೇಕು" ಎಂಬುದಾಗಿ ಅರಮನೆಯ ಕಟ್ಟಳೆಯನ್ನು ಮುರಿದರೆಂದು ತಿಳಿದು ಬರುತ್ತದೆ.[56] ಇದರಿಂದ ಚಿಕ್ಕ ದೇವರಾಜ ಒಡೆಯರವರು ಕೊಬ್ಬಿದ ರೈತರ ಸರ್ವಸ್ವವನ್ನು ತೆಗೆದುಕೊಂಡರೆಂದು ಸಹ ಶ್ರೀ ಮನ್ಮಹಾರಾಜ ವಂಶಾವಳಿಯಿಂದ ತಿಳಿದು ಬರುತ್ತದೆ. ಹಾಗೂ ರೈತರನ್ನು ತಗ್ಗಿಸುವ ನೆಪದಿಂದ ಹೆಚ್ಚಾಗಿ ಮನೆಹೆರಿಗೆ ಮೊದಲಾದ 19 ಬಾಬುಗಳನ್ನು ನೇಮಿಸಿದರೆಂದು ಸಹ ತಿಳಿಯುತ್ತದೆ. ಅವುಗಳು (1) ಮನೆ ಹೆರಿಗೆ (2) ಹುಲ್ಲುಹಣ (3) ದೇವರಾಯ ಪಟ್ಟಿ (4) ವರಸುಂಕ (5) ಸಮಯಾಚಾರ (16) ದನಕರು ಮಾರಿದ್ದಕ್ಕೆ ಸುಂಕ (7) ಕುರಿದೆರಿಗೆ (8) ಗುಳುವಿನ ಪೊಮ್ಮು (9) ಅಂಗಡಿವಸರ (10) ಕೂಟಾಚಾರ (11) ಉಬ್ಬೆ ಕಾಣಿಕೆ (12) ಅಂಗಡಿಪಟ್ಟಡಿ (13) ಗಿಡಕಾವಲು (14) ಜಾತಿಮಣಿಯ (15) ಮಗ್ಗದ ಕಂದಾಯ (16) ಪಾತವಾರ (17) ಮದುವೆದೆರಿಗೆ (18) ಉಪ್ಪಿನ ಮೋಳ (19) ಕೌದಿಯ ತೆರಿಗೆ. ಹೀಗೆ 19 ಬಾಬು ಗಳನ್ನು ರೈತರಿಗೆ ನಿಷ್ಕರ್ಷೆ ಮಾಡಿ, ಈ ಬಾಬುಗಳಲ್ಲಿ ಒಂದೊಂದಕ್ಕೆ ಒಬ್ಬೊಬ್ಬ ಮಣೇಗಾರ್, ಶ್ಯಾನುಭಾಗ, ಕೋಲುಕಾರ ಮುಂತಾದವರನ್ನು ನೇಮಕ ಮಾಡಿ ಈ ಬಾಬುಗಳನ್ನು ಗುತ್ತಿಗೆಗೆ ಕೊಟ್ಟು ಆಯಾ ಸಂವತ್ಸರದಲ್ಲಿ ಹುಟ್ಟಿದ ಗುತ್ತಿಗೆಯ ಹಣವನ್ನು ಆಯಾ ಗ್ರಾಮದ ಹುಟ್ಟುವಳಿಗೆ ಸೇರುವಂತೆಯೂ, ಈ ಹಣವೆಲ್ಲವೂ ಸೀಮೆಯ ಕಂದಾಯದ ಹಣದ ಜೊತೆಯಲ್ಲಿಯೇ ಬರುವಂತೆ ನಿಬಂಧನೆ ಮಾಡುತ್ತಿದ್ದರೆಂದು ತಿಳಿದು ಬರುತ್ತದೆ.

ಇದಲ್ಲದೆ ದವಸ, ತೂಕದ ಕಿರಾಣಿ, ಗಂದಿಗಜನಸು, ಜವಳಿ ಮುಂತಾದ ಸಕಲ ಪದಾರ್ಥ ಗಳನ್ನು 84 ಗಡಿಗಳ ಪೇಟೆಗಳಿಂದ ತೆಗೆದುಕೊಂಡು ಹೋಗುವುದಕ್ಕೂ, ಬರುವುದಕ್ಕೂ ಅಲ್ಲಿಯೇ ಕರಗ ಪಡಿ ಮಾಡುವುದಕ್ಕೂ ಅರಮನೆಗೆ ಕೂಡಿ ಬರುವಂತೆ ಆಯಾ ಜಿನಸಿನ ತಾರತಮ್ಯವಿದ್ದಂತೆ ಸುಂಕವನ್ನು ನಿಬಂಧನೆ ಮಾಡಿ, ಈ ಸುಂಕವನ್ನು ತೆಗೆದುಕೊಳ್ಳುವುದಕ್ಕೆ 'ಸುಂಕದ ಚಾವಡಿ' ಎಂಬುದಾಗಿ ಮಾಡಿ ಇದಕ್ಕೆ ಸುಂಕದ ಮಣೆಗಾರ, ಶ್ಯಾನುಭಾಗರು 1,2,3 ಕೋಲುಕಾರರು ಅಲ್ಲಲ್ಲಿ ಮಾರ್ಗಗಳಲ್ಲಿ ಉಕ್ಕಡು, ಆ ಉಕ್ಕಡಕ್ಕೆ ಒಬ್ಬೊಬ್ಬ ಕೋಲುಕಾರ, ಶ್ಯಾನುಭಾಗ ಮುಂತಾದವರನ್ನು ನೇಮಕಮಾಡಿ ಇವರಿಗೆಲ್ಲಾ ಸಂಬಳವನ್ನು ನಿಗದಿ ಮಾಡಿದನು.

ಗಡಿಗಳು ಮುಂತಾದ ಸ್ಥಳದ ಪೇಟೆಗಳಲ್ಲಿ ಬಣಜಿಗರು, ಕೋಮಟಿಗರು, ಪಂಚಾಳದವರು ಮೊದಲಾದ ಹಮಾಕೋಮಿನ ಜನಗಳು ತಮ್ಮ ತಮ್ಮ ಜಾತಿ ನಿಬಂಧನೆಯನ್ನು ಮೀರದಂತೆಯೂ,

ಕಳ್ಳತನ ನಡೆಯದಂತೆಯೂ, ಆಯಾ ಗಡಿಗಳಲ್ಲಿ ವ್ಯಾಪಾರಗಾರರು ಅರಮನೆಯ ನಿಬಂಧನೆಯ ಮೇರೆಗೆ ವ್ಯಾಪಾರಗಳನ್ನು ಮಾಡಬೇಕಾದುದಲ್ಲದೆ ಹೆಚ್ಚು ಕಡಿಮೆ ನಡೆಸದಂತೆಯೂ, ಅರಮನೆಯ ನಿಬಂಧನೆಯನ್ನು ಮೀರಿ ನಡೆದ ಜನರಿಗೆ ಶಿಕ್ಷೆ ಮಾಡುವಂತೆಯೂ ಪೇಟೆ 1ಕ್ಕೆ ಕೊತ್ತವಾಲ 1, ಶ್ಯಾನುಭಾಗರು ಪೇಟೆಯಿದ್ದಂತೆ 1,2,3 ಜನಗಳು ಮತ್ತು ಊಳಿಗದವರು ಪೇಟೆ ಸೆಟ್ಟಿ 1, ಯಜಮಾನ 1, ದೇಶದ ಶ್ಯಾನುಭಾಗ 1, ಚಲವಾದಿ 1, ಟುಮುಕಿ ಹೊಡೆದು ಸಾರುವುದಕ್ಕೆ ದಂಡಿಯವನು 1, ಕೊಂಬಿನವನು 1, ತಮಟೆಯವನು 1, ಕಳ್ಳಬಂಟರು ಮುಂತಾದ ಜನಗಳನ್ನು ನೇಮಕ ಮಾಡಿ ರಾತ್ರಿ ವೇಳೆಯಲ್ಲಿ ಕೊತ್ತವಾಲ, ದಂಡಿ, ಕಳ್ಳಕಾಕರಿಗೆ ಆಸ್ಪದವಿಲ್ಲದಂತೆ ಗಸ್ತಿಯನ್ನು ತಿರುಗಿಕೊಂಡು ಜಾಗರೂಕರಾಗಿರುವಂತೆಯೂ, ಕೊತ್ತವಾಲ, ಪೇಟೆಸೆಟ್ಟಿ, ಯಜಮಾನ ಇವರುಗಳು ವಿಚಾರಣೆ ಮಾಡಿ ಸ್ವಲ್ಪ ತಪ್ಪು ಮಾಡಿದವರ ಕೈಯಲ್ಲಿ ಅಪರಾಧ ದಂಡವನ್ನು ತೆಗೆದು ಕೊಳ್ಳುವಂತೆಯೂ, ಹೆಚ್ಚು ಅಪರಾಧ ಮಾಡಿದ ಜನಗಳಿಗೆ ಶಿಕ್ಷೆ ಮಾಡುವುದಕ್ಕೆ ದೊರೆಗಳಲ್ಲಿ ಭಿನ್ನವಿಸಿ, ಮೇಲೆ ಕಂಡ ಜನಗಳು ತಮ್ಮ ತಮ್ಮ ಜಾತಿ ಪದ್ಧತಿಯ ಮೇರೆಗೆ ನಡೆದುಕೊಳ್ಳು ವಂತೆಯೂ ಕಟ್ಟು ಮಾಡಿದರು. ಆಯಾ ಸೀಮೆಯ ಪದ್ಧತಿಯಂತೆ ದೇಶಮುಖಿ, ದೇಶಪಾಂಡೆ, ನಾಡಿಗರು ಮುಗಿದ ಕೈಗೆ ಹೊನ್ನು ತೆಗೆದುಕೊಳ್ಳುವವರು, ಹೆಬ್ಬಾರರು ಮುಂತಾದ ಜನಗಳಿಗೆ ಅವರವರ ಪೂರ್ವ ಪದ್ಧತಿ ಪ್ರಕಾರ ವೀಳೆಯ ಮೊದಲಾದ ಮರ್ಯಾದೆಗಳನ್ನು ನಡೆಸುವಂತೆ ಕಟ್ಟಳೆ ಯನ್ನು ಮಾಡಿದರು. ಗಡಿಗಳಿಂದ ನಿಬಂಧನೆ ಮಾಡಿರುವ ಮೇರೆಗೆ ಹಣ ವಸೂಲಾಗಿ ಬರುವುದಕ್ಕೆ ವರ್ಷ 1ಕ್ಕೆ 3 ಕಂದಾಯವೆಂಬುದಾಗಿ ನಿಷ್ಕರ್ಷೆ ಮಾಡಿ ಪ್ರತಿವರ್ಷದಲ್ಲಿಯೂ ಹಣ ಬಾಕಿ ನಿಲ್ಲದಂತೆ ವಸೂಲಾಗಿ ಅಠವಣೆ, ಕಂದಾಚಾರ, ದೇವದಾಯ, ಬ್ರಹ್ಮದಾಯ ಮುಂತಾದ ಸ್ಥಳದ ಸಿಬ್ಬಂದಿಯ ಖರ್ಚು ಕಳೆದು ಶ್ರೀರಂಗಪಟ್ಟಣದ ಬೊಕ್ಕಸಕ್ಕೆ ಬಂದ ಹಣವು ದವಲತ್ತಿನ ಖರ್ಚಿಗೆ ಎಂಬುದಾಗಿ ನಿಷ್ಕರ್ಷೆ ಮಾಡಿದರು.[57] ಸುಭದಾರನು ಪೈರುಪಚ್ಚೆ ಮುಂತಾದ ಬಾಬುಗಳಿಮದ ಹೆಚ್ಚು ಹುಟ್ಟುವಳಿ ಯನ್ನು ಮಾಡುವೆನೆಂದು ಮುಚ್ಚಳಿಕೆ ಬರೆದುಕೊಟ್ಟು ಆ ಪ್ರಕಾರ ವರುಷ 1ಕ್ಕೆ ಬರತಕ್ಕ ಕಂಠೀರಾಯಿ 7,20,000 ವರಹಗಳಲ್ಲಿ ಜಾಳಿಗೆ 1ಕ್ಕೆ 1000 ವರಹಗಳ ಪ್ರಕಾರ ಎರಡು ಬಳಿಗೆ ವರಹವು ಪ್ರತಿನಿತ್ಯದಲ್ಲಿಯೂ ಗಡಿಗಳಿಂದ ಬರುವಂತೆ ನಿಬಂಧನೆ ಮಾಡಿದ್ದಲ್ಲದೆ, ಗಡಿಗಳಿಂದ ಬಂದ ಈ ಹಣವನ್ನು ಸರ್ವಾಧಿಕಾರ ಮಾಡುವವನು ತಮ್ಮ ನಾಮತೀರ್ಥದ ವೇಳೆಗೆ ತಂದು ಒಪ್ಪಿಸುವಂತೆ ಕಟ್ಟಳೆ ಮಾಡಿದರು. ಈ ಮೇರೆಗೆ ಒಂದು ದಿವಸ ಹಣವು ಬರುವುದು ಸಾವಕಾಶವಾದರೆ ದೊರೆಗಳು ರಾಮಾಯಣ ಪಾರಾಯಣದಲ್ಲಿಯೇ ಕಾಲವನ್ನು ಕಳೆದು ಎರಡು ಸಾವಿರ ಬಂದ ಬಳಿಕ ಪರಾಂಭರಿಸಿ ನೋಟ ಸಲಿಕೆಯನ್ನು ಮಾಡಿಸಿ, ಅರಮನೆಯ ಖಾಸ ಬೊಕ್ಕಸಕ್ಕೆ ಕಳುಹಿಸಿದ ಮೇಲೆ

ಆರೋಗಣೆಯನ್ನು ಒಪ್ಪಿಸಿಕೊಳ್ಳುತ್ತಿದ್ದರು ಮತ್ತು ಈ ಹಣದಲ್ಲಿಯೇ ದಾನಧರ್ಮಗಳನ್ನು ಮಾಡುತ್ತಿದ್ದರು.

ಪೂರ್ವದಲ್ಲಿ ರಣಧೀರ ಕಂಠೀರವ ನರಸರಾಜ ಒಡೆಯುವರು ಸಕಲ ಪದಾರ್ಥಗಳನ್ನು ತುಂಬುವುದಕ್ಕೆ ಶ್ರೀರಂಗಪಟ್ಟಣದ ಕೋಟೆಯಲ್ಲಿ ಕಟ್ಟಿಸಿರುವ ದೊಡ್ಡ ಉಗ್ರಾಣದಲ್ಲಿ ಸೀಮೆಗಳಿಂದ ಬಂದ ವಾರದ ದವಸಗಳನ್ನೂ, ಕ್ರಯಕ್ಕೆ ತರಿಸಿದ ಎಣ್ಣೆ, ತುಪ್ಪ ಮುಂತಾದ ಕಿರಾಣಿ ಜಿನಸುಗಳನ್ನೂ ಹೊಸದಾಗಿ ತುಂಬಿಸಿ, ಹಳದಾಗಿದ್ದ ಸಕಲ ಪದಾರ್ಥಗಳನ್ನು ಪ್ರತಿನಿತ್ಯದಲ್ಲಿಯೂ ಅರಮನೆ ಮುಂತಾದ ಸ್ಥಳದಲ್ಲಿ ವೆಚ್ಚ ಮಾಡುವುದಕ್ಕೆ ಹೊಸದಾಗಿ ಕಟ್ಟಿಸಿರುವ ಚಿಕ್ಕ ಉಗ್ರಾಣಕ್ಕೆ ಕಳುಹಿಸಿ ಕೊಡುವಂತೆಯೂ, ದೊಡ್ಡ ಉಗ್ರಾಣದಲ್ಲಿ ವೆಚ್ಚವಾದ ಜಿನಸುಗಳಿಗೆ ಸರಿಯಾಗಿ ಹೊಸದಾಗಿ ಭರ್ತಿ ಯಾಗಿರುವಂತೆಯೂ ನಿಬಂಧನೆ ಮಾಡಿಸಿದ್ದರು.[58] ಗಡಿಗಳಲ್ಲಿರುವ ಅರಮನೆಯ ಪಣ್ಯದ ತೋಟ ಗಳಲ್ಲಿ ಉತ್ಪತ್ತಿಯಾದ ತೆಂಗು, ಹಲಸು, ಮಾವು, ನಿಂಬೆ, ಕಿತ್ತಳೆ, ದಾಳಿಂಬೆ, ಹೇರಿಳ, ವೀಳೆಯ ದೆಲೆ, ಬಾಳೆ, ಸವುತೆ, ಹೀರೆ, ಪಡವಲ, ಕುಂಬಳ, ಗೆಣಸು, ಬದನೆ ಮುಂತಾದ ಹಸರುವಾಣಿ ಜಿನಸುಗಳು ಚಿಕ್ಕ ಉಗ್ರಾಣಕ್ಕೆ ದೊಡ್ಡ ಉಗ್ರಾಣದಿಂದ ಬಂದ ಪದಾರ್ಥಗಳಲ್ಲಿಯೂ ಪಣ್ಯದ ತೋಟಗಳಿಂದ ಬಂದ ಹಸುರುವಾಣಿ ಜನಸುಗಳಲ್ಲಿಯೂ, ಅರಮನೆ ಮುಂತಾದ ಸ್ಥಳಗಳಲ್ಲಿ ವೆಚ್ಚ ವಾದ ಜಿನಸುಗಳು ಹೊರತು ನಿಂತ ಜಿನಸುಗಳನ್ನು ಕಡ್ಡಾಯ ಹಾಕುವಂತೆ ಮಾಡಿದ್ದಲ್ಲದೆ ಹಸುರು ವಾಣಿ ಜಿನಸುಗಳು ಕರಗಪಡಿಯಾಗುವುದಕ್ಕೆ ಪಣ್ಯದ ಅಂಗಡಿಯನ್ನು ನಿಬಂಧನೆ ಮಾಡಿಸಿದ್ದರು ಮತ್ತು ಎರಡು ಉಗ್ರಾಣಗಳಿಗೂ ಗುರಿಕಾರರು 1–2, ಕರಣಿಕರು 3, ಗುಮಾಸ್ತೆಯರು, ಊಳಿಗದವರು, ಅಳತೆಯವರು, ತೂಕದವರು, ಕಾಮಾಟ, ಚಂಗೂಲಿ ಪಹರೆಯವರು ಮುಂತಾದ ಜನಗಳನ್ನು, ಪಣ್ಯದ ಅಂಗಡಿಗೆ ಶ್ಯಾನುಭಾಗನನ್ನು ವ್ಯಾಪಾರ ಮಾಡುವುದಕ್ಕೆ ಗೊಲ್ಲನನ್ನು, ಹುಲ್ಲು ಮೆದೆಗೆ ಗುರಿಕಾರ 1, ಶ್ಯಾನುಭಾಗ 2,3,4, ಊಳಿಗದವರು, ಕಾಮಾಟ ಮುಂತಾದ ಜನಗಳನ್ನು ನೇಮಕ ಮಾಡಿಸಿ, ಈ ಜನಗಳಿಗೆಲ್ಲಾ ಅವರವರ ವಿಧವಂತು ಸಂಬಳವನ್ನು ಈ ಸಂಬಳಕ್ಕೆ 1/2 ಬತ್ತವನ್ನು 1/2 ನಗದು ಹಣವನ್ನು ಕೊಡುವಂತೆ ನಿಬಂಧನೆ ಮಾಡಿಸಿದ್ದರು.

ಪೂರ್ವದಲ್ಲಿ ರಣಧೀರ ಕಂಠೀರವ ನರಸರಾಜ ಒಡೆಯರವರು ಶ್ರೀರಂಗಪಟ್ಟಣದ ಕೋಟೆ ಯೊಳಗೆ ಕಟ್ಟಿಸಿರುವ ಜಾನಸಾಲೆ, ಮದ್ದಿನಮನೆ, ಅಲಗಿನ ಚಾವಡಿ, ಮೊದಲಾದವುಗಳನ್ನು ಮೊದಲಿಗಿಂತ ವಿಸ್ತಾರವಾಗಿ ಮಾಡಿಸಿ, ಈ ಜಾನಸಾಲೆಯಲ್ಲಿ ಹಗಲು ಬತ್ತಿ, ಹೂಬಾಣ, ಆಕಾಶ

ಕೊಳಲು, ಚಕ್ರಬಾಣ, ನಕ್ಷತ್ರ ಬಾಣ ಮತ್ತು ನಾನಾ ವಿಧದ ವೃಕ್ಷಪಕ್ಷಿಗಳಾಕಾರದ ಬಾಣಗಳನ್ನು ಮಾಡಿಸಿ, ಈ ಬಾಣಗಳನ್ನು ನವರಾತ್ರಿ ಉತ್ಸವ, ದೇವತೋತ್ಸವ ಮುಂತಾದ ಉತ್ಸವಗಳ ಕಾಲದಲ್ಲಿ ಹಚ್ಚಿಸುವಂತೆ ಕಟ್ಟಳೆ ಮಾಡಿ, ಪೂರ್ವಕ್ಕಿಂತ ಅಧಿಕವಾಗಿ ಕತ್ತಿ, ಕಠಾರಿ, ತುಫಾಕಿ, ಮದ್ದು, ಗುಂಡು ಮೊದಲಾದ ಯುದ್ಧ ಸಾಮಗ್ರಿಗಳನ್ನು ಹೇರಳವಾಗಿ ಮಾಡುವಂತೆ ಕಟ್ಟು ಮಾಡಿ ಇದರ ವಿಚಾರಣೆಗೂ ಲೆಕ್ಕವನ್ನು ಬರೆವುದಕ್ಕೂ ಗುರಿಕಾರ, ಶ್ಯಾನುಭಾಗ ಮುಂತಾದ ಆಯಾ ಪಣಕಟ್ಟಿನ ಜನಗಳನ್ನು ನೇಮಕ ಮಾಡಿಸಿದ್ದರು.

ಅಲ್ಲದೆ ಅರಮನೆಯಲ್ಲಿ ಬೊಕ್ಕಸ ಮುಂತಾದ ಗೊತ್ತು ಸ್ಥಳಗಳನ್ನು ಮಾಡಿಸಿದ್ದ ವಿವರ ಇಲ್ಲಿ ಕೊಡಲಾಗಿದೆ. (1) ಹಣಕಾಸುಗಳನ್ನಿರಿಸುವ ಬೊಕ್ಕಸ (2) ಜವಳಿಯ ಬೊಕ್ಕಸ (3) ಕತ್ತಿಯ ಬೊಕ್ಕಸ (4) ಸಮುಖದ ಬಾಗಿಲು (5) ನಾಮತೀರ್ಥದ ತೊಟ್ಟಿ (6) ಮೈಸೂರು ಹೋಬಳಿಯ ಇಟ್ಟಿಹೂಳಿಗ (7) ಪಟ್ಟಣದ ಹೋಬಳಿಯ ಇಟ್ಟಿ ಊಳಿಗ (8) ಕುದುರೆಯ ಲಾಯ (9) ಆನೆಯ ಲಾಯ (10) ಒಂಟೆಯ ಲಾಯ (11) ಕಾಣಿಕೆಯ ಬೊಕ್ಕಸ (12) ಒಡವೆಯ ಬೊಕ್ಕಸ (13) ಹಾಸಿಗೆ ಬೊಕ್ಕಸ (14) ಒಳಬಾಗಿಲು (15) ಸಮುಖದ ಊಳಿಗ (16) ಗೊಲ್ಲರ ಹೋಬಳಿ (17) ಹಸುವಿನ ಕರೆವ ಹಟ್ಟಿ (18) ಎಮ್ಮೆಯ ಕರೆವ ಹಟ್ಟಿ (19) ಕೋಟಿಯೆತ್ತು (20) ಪರದೇಶದ ಹೋಬಳಿ (21) ಖಾಸಾ ಮೈಗಾವಲ ಜನಗಳು, ನಾಮಾಂತರ ಖಾಸ ರಾವುತರು (22) ಅವಸರದ ಹೋಬಳಿ – ಅವಸರದ ಹೋಬಳಿಗೆ ಏಳಿತವಾಗಿರುವುದು; ಚಿನ್ನ, ಬೆಳ್ಳಿ, ಸೋಟೆಯವರು, ಓಲಗ ದವರು, ಹೆಣ್ಣುಮೇಳದವರು, ಹೊಗಳುವ ಭಟ್ಟರು, ನವಪತ್ತು ಖಾನೆಯವರು, ಬೆಸ್ತರು, ದೀವಟಿಗೆ ಯವರು, ದೀಪದ ಕಂಬದವರು, ಇವುಗಳಿಗೆಲ್ಲಾ ಗೊತ್ತುಗಾರರನ್ನು, ಶ್ಯಾನುಭಾಗರನ್ನು ನೇಮಕ ಮಾಡಿಸಿದ್ದರು.[59]

ಶ್ರೀರಂಗಪಟ್ಟಣ ಪ್ರದೇಶದ ಶಾಸನಗಳು ಅಳತೆ, ತೂಕ ಮತ್ತು ನಾಣ್ಯಗಳಿಗೆ ಸಂಬಂಧಿಸಿದಂತೆ ಅನೇಕ ವಿವರಗಳನ್ನು ನೀಡುತ್ತವೆ. ಅವುಗಳನ್ನು ಈ ಕೆಳಗೆ ಪಟ್ಟಿಮಾಡಿ ಕೊಡಲಾಗಿದೆ.

## ನಾಣ್ಯಗಳು

| ಕ್ರ.ಸಂ. | ನಾಣ್ಯದ ಹೆಸರು | ಕಾಲ | ಆಕರ |
|---|---|---|---|
| 1 | ಗದ್ಯಾಣ, ವರಹ | ಕ್ರಿ.ಶ. 1564 | ಎ.ಕ.6 (ಎನ್.ಎಸ್) ಶ್ರೀ ಪ.5 |
| 2 | ಹಣ, ಹೊನ್ನು | ಕ್ರಿ.ಶ. 1437 | ಅದೇ ಶ್ರೀ ಪ.3 |
| 3 | ರೂಪಾಯಿ | – | ಅದೇ ಶ್ರೀ ಪ.17 |
| 4 | ಪಗೋಡ 60 | ಕ್ರಿ.ಶ. 1793 | ಅದೇ ಶ್ರೀ ಪ.68 |
| 5 | ಗದ್ಯಾಣ | – | ಅದೇ ಶ್ರೀ ಪ.27 |
| 6 | ಕಂಠೀರಾಯಿ ಗುಣಿಗೆ | ಕ್ರಿ.ಶ. 1666 | ಅದೇ ಶ್ರೀ ಪ.38 |
| 7 | ವರಹ | ಕ್ರಿ.ಶ. 1664 | ಅದೇ ಶ್ರೀ ಪ.23 |
| 8 | ಹೊನ್ನು | ಕ್ರಿ.ಶ. 1108 | ಅದೇ ಶ್ರೀ ಪ.113 |
| 9 | ಗದ್ಯಾಣ | 13ನೇ ಶತಮಾನ | ಅದೇ ಶ್ರೀ ಪ.108 |

## ಅಳತೆ–ತೂಕ

| ಕ್ರ.ಸಂ. | ಅಳತೆ ತೂಕದ ಹೆಸರು | ಕಾಲ | ಆಕರ |
|---|---|---|---|
| 1 | ಕೊಳಗ | ಕ್ರಿ.ಶ. 1431 | ಎ.ಕ.6 (ಎನ್.ಎಸ್) ಶ್ರೀ ಪ.3 |
| 2 | ಗದ್ದೆ, ಕಂಬ 60 | ಕ್ರಿ.ಶ. 1512 | ಅದೇ ಶ್ರೀ ಪ.110 |
| 3 | ಪಡಿ, ಕಾಲುವೆ, ಖಂಡುಗ | ಕ್ರಿ.ಶ. 1531 | ಅದೇ ಶ್ರೀ ಪ.31 |
| 4 | ಬಳ್ಳ | ಕ್ರಿ.ಶ. 1528 | ಅದೇ ಶ್ರೀ ಪ.8 |
| 5 | ಖಂಡುಗ | ಕ್ರಿ.ಶ. 1598 | ಅದೇ ಶ್ರೀ ಪ.71 |
| 6 | ಖಂಡುಗ 28 | ಕ್ರಿ.ಶ. 1662 | ಅದೇ ಶ್ರೀ.ಪ.121 |
| 7 | ಗಜ | ಕ್ರಿ.ಶ. 1793 | ಅದೇ ಶ್ರೀ ಪ.68 |
| 8 | ಖಂಡುಗ | – | ಅದೇ ಶ್ರೀ ಪ.106 |
| 9 | ಖಂಡುಗ | – | ಅದೇ ಶ್ರೀ ಪ.101 |
| 10 | ಖಂಡುಗ | 13ನೇ ಶತಮಾನ | ಅದೇ ಶ್ರೀ ಪ.108 |
| 11 | ಬಳ್ಳ, ಕೊಳಗ | ಕ್ರಿ.ಶ. 1108 | ಅದೇ ಶ್ರೀ ಪ.113 |

ಈ ಮೇಲೆ ಸೂಚಿಸಿರುವ ತೂಕ ಮತ್ತು ಅಳತೆಗಳನ್ನು, ನಾಣ್ಯಗಳನ್ನು ವ್ಯಾಪಾರದಲ್ಲಿ ಬಳಸಿಕೊಳ್ಳುತ್ತಿದ್ದರು. ಬಣಜಿಗರು ಪ್ರಮುಖ ವ್ಯಾಪಾರಿ ವರ್ಗದವರಾಗಿದ್ದರು.[60] ಸಂತೆಗಳು ವ್ಯಾಪಾರದ ಪ್ರಮುಖ ಕೇಂದ್ರಗಳಾಗಿದ್ದವು. ವಾರಕ್ಕೊಮ್ಮೆ ಈ ಸಂತೆ ಸೇರುತ್ತಿತ್ತು. ಶ್ರೀರಂಗ ಪಟ್ಟಣದಲ್ಲಿ ದೊಡ್ಡ ಸಂತೆ ಸೇರುತ್ತಿತ್ತು ಮತ್ತು ಇಂದಿಗೂ ಆ ಸಂತೆ ಅಸ್ಥಿತ್ವದಲ್ಲಿದೆ.

ಬುಕ್ಯಾನನು ಸಂತೆಗಳ ಬಗ್ಗೆ ಪ್ರಸ್ತಾಪಿಸಿದ್ದಾನೆ. ಶ್ರೀರಂಗಪಟ್ಟಣ ಮತ್ತು ಸುತ್ತಮುತ್ತ ವಾರದ ಸಂತೆಗಳು ನಡೆಯುತ್ತಿದ್ದವು. ಅವನ ಪ್ರಕಾರ 2–3 ಮೈಲಿಗಳ ಅಂತರದಲ್ಲಿ ಒಂದು ಸಂತೆ ಇದ್ದಿತು. ರೈತರು ತಮ್ಮ ಉತ್ಪನ್ನಗಳನ್ನು ಮಾರಾಟ ಮಾಡಲು ಸಂತೆಗೆ ಬರುತ್ತಿದ್ದರು. ರೈತರಿಂದ ವಸ್ತುಗಳನ್ನು ಚಿಲ್ಲರೆ ವ್ಯಾಪಾರಿಗಳು ಮತ್ತು ಸಗಟು ವ್ಯಾಪಾರಿಗಳು ಕೊಂಡುಕೊಳ್ಳುತ್ತಿದ್ದರು. ಸಂತೆಯ ಆರಂಭದ ದಿವಸದ ಮುಂಚಿನ ವೇಳೆಯಲ್ಲಿ ರೈತರು ಚಿಲ್ಲರೆ ವ್ಯಾಪಾರಿಗಳಿಗೆ ತಮ್ಮ ವಸ್ತುಗಳನ್ನು ಮಾರಾಟ ಮಾಡಲು ಪ್ರಯತ್ನಿಸುತ್ತಿದ್ದರು. ಹಣದ ಕೊರತೆ ಇದ್ದ ರೈತರು ಮಾತ್ರ ಸಗಟು ವ್ಯಾಪಾರಿಗಳ ಜೊತೆ ವ್ಯಾಪಾರ ಮಾಡುತ್ತಿದ್ದರು. ಬೆಳೆಯ ಆಧಾರದ ಮೇಲೆ ವ್ಯಾಪಾರಿಗಳು ಮುಂಗಡ ಹಣವನ್ನು ರೈತರಿಗೆ ಕೊಡುವ ಪದ್ಧತಿ ಶ್ರೀರಂಗಪಟ್ಟಣದ ಸುತ್ತಮುತ್ತ ಇರಲಿಲ್ಲವೆಂದು ಬುಕ್ಯಾನನ್ ಬರೆಯುತ್ತಾನೆ. ಹೀಗೆ ಮುಂಗಡ ಹಣವನ್ನು ಕೊಟ್ಟು ರೈತರಿಂದ ಸುಗ್ಗಿ ಕಾಲಕ್ಕೆ ಉತ್ಪನ್ನವನ್ನು ತೆಗೆದುಕೊಳ್ಳುತ್ತಿರಲಿಲ್ಲ. ಈ ಎಲ್ಲಾ ಸಂತೆಗಳಲ್ಲಿ ಮಾರಾಟದ ಮೂಲಕ ವ್ಯವಹಾರ ನಡೆಯುತ್ತಿತ್ತು, ವ್ಯಾಪಾರ ಇರಲಿಲ್ಲ. ಕೇವಲ ಕೆಲವು ಬಡ ಜನರು ಮಾತ್ರ ಧಾನ್ಯಕ್ಕೆ ಬದಲಾಗಿ ತರಕಾರಿಯನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರು.[61]

ಶ್ರೀರಂಗಪಟ್ಟಣ ರಾಜ್ಯದ ರಾಜಧಾನಿಯಾಗಿದ್ದುದರಿಂದ ದೊಡ್ಡ ವ್ಯಾಪಾರ ಕೇಂದ್ರವು ಆಗಿದ್ದಿತು. ದೇಶದ ನಾನಾ ಕಡೆಯಿಂದ ಬಂದ ವರ್ತಕರು ಇಲ್ಲಿ ವ್ಯಾಪಾರ ನಡೆಸುತ್ತಿದ್ದರು. ಬಣಜಿಗರಲ್ಲದೆ ಶೆಟ್ಟರು ಅಥವಾ ಕೋಮಟಿಗರು ವ್ಯಾಪಾರ ಮಾಡುತ್ತಿದ್ದರು. ದವಸ, ಧಾನ್ಯ, ಬಟ್ಟೆ, ಒಡವೆಗಳು, ಚಿನ್ನ, ಬೆಳ್ಳಿ ಮತ್ತು ಶ್ರೀಮಂತ ವರ್ಗಕ್ಕೆ ಬೇಕಾಗುವ ವೈಭೋಗದ ವಸ್ತುಗಳು ಶ್ರೀರಂಗ ಪಟ್ಟಣದಲ್ಲಿ ಮಾರಾಟವಾಗುತ್ತಿದ್ದವು. ವ್ಯಾಪಾರದ ಮೇಲೆ ಸುಂಕವನ್ನು ಹಾಕುತ್ತಿದ್ದರು. ಚಿಕ್ಕ ದೇವರಾಜ ಒಡೆಯರ ಕಾಲದಲ್ಲಿ ವ್ಯಾಪಾರದ ಮೇಲೆ ಸುಂಕ ಹಾಕುವ ಪದ್ಧತಿ ಜಾರಿಗೆ ಬಂದಿತು.

ಸೀಮೆಯ ಮೇಲೆ ವ್ಯಾಪಾರಸ್ಥರು ತಂದು ಮಾರುವ ದವಸ, ಧಾನ್ಯ ಮುಂತಾದ ಜಿನಸುಗಳಿಗೆ ಆಯಾ ಗಡಿಗಳ ಸುಂಕದ ಚಾವಡಿಯಲ್ಲಿ ಕಟ್ಟಳೆಯ ಮೇರೆಗೆ ಸುಂಕದ ಹಣಕಾಸುಗಳನ್ನು ಗೋಲಕಕ್ಕೆ ಸೇರುವಂತೆ, ವ್ಯಾಪಾರಸ್ಥರೂ, ತಂದ ಜಿನಸುಗಳಿಗೆ ಮುನಾಸಬು ಇದ್ದ ಮೇರೆಗೆ ಹೆರು 1ಕ್ಕೆ ಪಾವು ಸೇರಿನಂತೆ ನಿಷ್ಕರ್ಷೆ ಮಾಡಿ ಅದನ್ನು ಆಯಾ ಗಡಿಗಳಲ್ಲಿರುವ ದೇವರುಗಳಿಗೂ, ಕೆಲವು ಬ್ರಾಹ್ಮಣರು ಮುಂತಾದ ಜನಗಳಿಗೂ ತಾರತಮ್ಯವನ್ನು ನೋಡಿ 'ರುಸುಂ' ಎಂಬುದಾಗಿ ಕೊಡುವಂತೆಯೂ ನೇಮಕ ಮಾಡಿಸಿದ್ದರು.[62]

ಟಿಪ್ಪು ಮತ್ತು ಹೈದರ್ ಕಾಲದಲ್ಲಿ ಶ್ರೀರಂಗಪಟ್ಟಣ ವ್ಯಾಪಾರ ಕೇಂದ್ರವಾಗಿ ಮತ್ತಷ್ಟು ಅಭಿವೃದ್ಧಿಯನ್ನು ಪಡೆಯಿತು. ಶ್ರೀರಂಗಪಟ್ಟಣದಲ್ಲಿ ಶಸ್ತ್ರಾಸ್ತ್ರಗಳನ್ನು ತಯಾರಿಸುವ, ಬಟ್ಟೆ ಕಾಗದದ ಕಾರ್ಖಾನೆ ಮತ್ತು ಸಕ್ಕರೆ ತಯಾರಿಸುವ ಕಾರ್ಖಾನೆಗಳು ತಲೆ ಎತ್ತಿದ್ದವು.[63] ಶ್ರೀರಂಗಪಟ್ಟಣಕ್ಕೆ ಐರೋಪ್ಯ ವರ್ತಕರ ಸಂಪರ್ಕ ಉಂಟಾಯಿತು. ಆದರೆ 4ನೇಯ ಮೈಸೂರು ಯುದ್ಧವಾದ ಮೇಲೆ ಟಿಪ್ಪುವಿನ ಮರಣಾನಂತರ ವ್ಯಾಪಾರ ಕೇಂದ್ರವಾಗಿದ್ದ ಶ್ರೀರಂಗಪಟ್ಟಣದ ಅವನತಿ ಆರಂಭವಾಯಿತು. ಪ್ರವಾಸ ಕೈಗೊಂಡಿದ್ದ ಬುಕ್ಯಾನನ್ ಸಹ ಸ್ಪಷ್ಟಪಡಿಸಿದ್ದಾನೆ.[64]

## ಕೋಟೆಯ ಒಳಗಿನ ಸಾರಿಗೆ ವ್ಯವಸ್ಥೆ

ಶ್ರೀರಂಗಪಟ್ಟಣದ ಸಾರಿಗೆ ವ್ಯವಸ್ಥೆಯನ್ನು ಕುರಿತಂತೆ ಕೆಲವು ವಿಷಯಗಳನ್ನು ಇಲ್ಲಿ ಪ್ರಸ್ತಾಪಿಸಬಹುದು. ಶ್ರೀರಂಗಪಟ್ಟಣದ ಕೋಟೆಯ ಒಳಗೆ ಒಳ್ಳೆಯ ರಸ್ತೆಗಳು ಇದ್ದವು. ರಾಜಧಾನಿಯಾಗಿದ್ದ ಶ್ರೀರಂಗಪಟ್ಟಣ ವ್ಯಾಪಾರ ಕೇಂದ್ರವೂ ಆಗಿದ್ದುದರಿಂದ ವ್ಯಾಪಾರ ವರ್ಗದವರು ಇಲ್ಲಿ ನೆಲೆಸಿದ್ದರು. ಪ್ರಾಣಿಗಳ ಮೇಲೆ ಸಾಮಾನುಗಳನ್ನು ಸಾಗಿಸುತ್ತಿದ್ದರು. ದೊಡ್ಡದೊಡ್ಡ ವರ್ತಕರು ಎತ್ತಿನ ಗಾಡಿಗಳಲ್ಲಿ ಮಾಲುಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸುತ್ತಿದ್ದರು. ತಲೆಯ ಮೇಲೂ ಪದಾರ್ಥಗಳನ್ನು ಸಾಗಿಸುವ ಪದ್ಧತಿ ಇದ್ದಿತು. ಶ್ರೀರಂಗಪಟ್ಟಣದ ಪರಿಸರದಲ್ಲಿ ಸಾರಿಗೆ ಸಂಪರ್ಕ ಸಮರ್ಪಕವಾಗಿತ್ತೆಂದು ಹೇಳಬಹುದು. ಮೈಸೂರಿನ ಒಡೆಯರು, ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಇದಕ್ಕಾಗಿ ಸಾಕಷ್ಟು ಶ್ರಮ ವಹಿಸಿದ್ದರು. ನದಿಯನ್ನು ದಾಟಲು ಮೊದಲು ಸೇತುವೆಗಳು ಇರಲಿಲ್ಲ. ಆಗ ದೋಣಿಗಳನ್ನು ಉಪಯೋಗಿಸುತ್ತಿದ್ದರು. ಜನರನ್ನು ಮತ್ತು ಪದಾರ್ಥಗಳನ್ನು ಸಾಗಿಸಲು ನಾನಾ ತರಹದ ದೋಣಿಗಳನ್ನು ಬಳಸುತ್ತಿದ್ದರು. ಕಾಲಾನಂತರದಲ್ಲಿ ನದಿಗೆ ಅಡ್ಡಲಾಗಿ ಸೇತುವೆಯನ್ನು ನಿರ್ಮಿಸಲಾಯಿತು. ವ್ಯಾಪಾರ ವ್ಯವಹಾರಗಳಲ್ಲಿ ಚಿನ್ನ, ಬೆಳ್ಳಿ ಮತ್ತು

ತಾಮ್ರದ ನಾಣ್ಯಗಳು ಬಳಕೆಯಲ್ಲಿದ್ದವು. ಜೊತೆಗೆ ವುಂಡಿಯನ್ನು ಬಳಸುತ್ತಿದ್ದರು. ಒಟ್ಟನಲ್ಲಿ 1799ರ ವರೆಗೆ ಶ್ರೀರಂಗಪಟ್ಟಣ ವ್ಯವಸಾಯ, ಕೈಗಾರಿಕೆ, ವ್ಯಾಪಾರ ಮತ್ತು ಸಾರಿಗೆಯ ದೃಷ್ಟಿಯಿಂದ ಸಾಕಷ್ಟು ಸಂವೃದ್ಧಿಯಾಗಿತ್ತೆಂದು ಹೇಳಬಹುದು.

## ಅಡಿಟಿಪ್ಪಣಿಗಳು

1) E.C.6 (N.S) ಶ್ರೀ ಪ.94
2) ಅದೇ ಶ್ರೀ.ಪ.74, 1422 ಎ.ಡಿ
3) ಅದೇ ಶ್ರೀ.ಪ.74, 1422 ಎ.ಡಿ
4) ಅದೇ ಶ್ರೀ.ಪ.3, 1431 ಎ.ಡಿ
5) ಅದೇ ಶ್ರೀ ಪ.93, 1458 ಎ.ಡಿ. ಪಿ.416, ಸಾಲು, 46, 47
6) ಅದೇ ಶ್ರೀ ಪ.93, 1458, ಪುಟ 416, ಸಾಲು 40
7) ಅದೇ ಶ್ರೀ ಪ.2, 1528 ಎ.ಡಿ
8) ಅದೇ ಶ್ರೀ ಪ.24, 1686 ಎ.ಡಿ
9) ಅದೇ ಶ್ರೀ ಪ.101, ಅದೇ ಶ್ರೀ ಪ.23, 1664 ಎ.ಡಿ
10) ಅದೇ ಶ್ರೀ ಪ.101
11) ಅದೇ ಶ್ರೀ ಪ.22, 1662 ಎ.ಡಿ
12) Buchanan H.F. – A Journey from Madras through the countries of Mysore, Canara and Malabar, London 1807, vol-1, p.83
13) ಅದೇ ಪುಟ 84
14) ಅದೇ ಪುಟ 84
15) ಅದೇ ಪುಟ 85–88
16) ಅದೇ ಪುಟ 90
17) ಅದೇ ಪುಟ 91
18) ಅದೇ ಪುಟ 92–93
19) ಅದೇ ಪುಟ 93–95
20) ಅದೇ ಪುಟ 95
21) ಅದೇ ಪುಟ 97
22) ಅದೇ ಪುಟ 99–100
23) ಅದೇ ಪುಟ 100–103
24) ಅದೇ ಪುಟ 104–105

25) ಅದೇ ಪುಟ 108-110

26) ಅದೇ ಪುಟ 111-112

27) ಅದೇ ಪುಟ 111-116

28) ಅದೇ ಪುಟ 116-121

29) E.C.6 (N.S) ಶ್ರೀ ಪ.5, 1564 ಎ.ಡಿ

30) ಅದೇ ಶ್ರೀ ಪ.25, 1430 ಎ.ಡಿ

31) ಅದೇ ಶ್ರೀ ಪ.21, 1447 ಎ.ಡಿ

32) ಬಿ.ರಾಮಕೃಷ್ಣರಾವ್ - ಶ್ರೀ ಮನ್ಮಹಾರಾಜರವರ ವಂಶಾವಳಿ ಭಾಗ-1, ಪುಟ 60-61

33) ಅದೇ ಪುಟ 89, 90

34) ಅದೇ ಪುಟ 90

35) ಅದೇ ಪುಟ 90-91

36) ಅದೇ ಪುಟ 91

37) ಅದೇ ಪುಟ 92

38) ಅದೇ ಪುಟ 93

39) ಅದೇ ಪುಟ 99, 100

40) ಅದೇ ಪುಟ 101

41) ಅದೇ ಪುಟ 101

42) ಅದೇ ಪುಟ 137-139

43) ಅದೇ ಪುಟ 140-141

44) ಅದೇ ಪುಟ 142

45) ಅದೇ ಪುಟ 157, 158

46) ಅದೇ ಪುಟ 161, 162

47) ಅದೇ ಪುಟ 116, 117

48) ಅದೇ ಪುಟ 117

49) ಅದೇ ಪುಟ 118

50) ಅದೇ ಪುಟ 118, 119

51) ಅದೇ ಪುಟ 119

52) ಅದೇ ಪುಟ 119

53) ಅದೇ ಪುಟ 120

54) ಅದೇ ಪುಟ 120–122

55) ಅದೇ ಪುಟ 123

56) ಅದೇ ಪುಟ 123

57) ಅದೇ ಪುಟ 126

58) ಅದೇ ಪುಟ 127

59) ಅದೇ ಪುಟ 128

60) E.C.6 (N.S) ಶ್ರೀ ಪ.5 1564 ಎ.ಡಿ

61) Buchanan H.F. – A Journey from Madras through the contries of Mysore, Canara and Malabar, vol.1, p.125.

62) ಬಿ.ರಾಮಕೃಷ್ಣರಾವ್ – ಶ್ರೀ ಮನ್ಮಹರಾಜ ವಂಶಾವಳಿ ಭಾಗ–1, ಪುಟ.142

63) ಬಿ.ಷೇಕ್ಆಲಿ –ಟಿಪ್ಪು ಸುಲ್ತಾನ್, ಹೊಸ ದೆಹಲಿ, 1995, ಪು.65–74

64) Buchanan H.F. – A Journey from Madras trough the contries of Mysore, Canara and Malabar, vol-1, p.126-127

# ಅಧ್ಯಾಯ-3
# ಶ್ರೀರಂಗಪಟ್ಟಣದ ಸಾಮಾಜಿಕ ವರ್ಗಗಳು

ಶ್ರೀರಂಗಪಟ್ಟಣವು ಮೈಸೂರು ರಾಜ್ಯದ ಸಮಗ್ರ ಸಾಮಾಜಿಕ ಚಿತ್ರವನ್ನು ಸ್ಥೂಲವಾಗಿ ಬಿತ್ತರಿಸುವ ಕೇಂದ್ರ ಅದಾಗಿತ್ತೆಂದು ಹೇಳಬಹುದು. ವಿಜಯನಗರ ಕಾಲದಿಂದ ಆರಂಭವಾಗಿ ಒಡೆಯರ ಕಾಲದವರೆಗೆ ಶ್ರೀರಂಗಪಟ್ಟಣ ಸಾಮಾಜಿಕವಾಗಿ ತನ್ನ ವೈವಿಧ್ಯತೆಯನ್ನು ಬೆಳೆಸಿಕೊಳ್ಳುತ್ತಾ ಸಾಗಿತು. ಅರವೀಡು ವಂಶದ ವಿಜಯನಗರದ ಅರಸರು ಶ್ರೀ ವೈಷ್ಣವರಾಗಿದ್ದರು. ಅನೇಕ ಮೈಸೂರಿನ ಒಡೆಯರು ಕೂಡ ಶ್ರೀ ವೈಷ್ಣವರಾಗಿದ್ದರು. ದಳವಾಯಿಗಳಲ್ಲಿ ಅನೇಕರು ವೀರಶೈವ ರಾಗಿದ್ದರು. ವೀರಶೈವ ಮಂತ್ರಿಗಳು ಆಡಳಿತದಲ್ಲಿ ಸೇವೆ ಸಲ್ಲಿಸುತ್ತಿದ್ದರು. ಜೈನರು ಇದ್ದರು. ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲಿ ಶ್ರೀರಂಗಪಟ್ಟಣದ ಪರಿಸರದಲ್ಲಿ ಅವರ ಆಶ್ರಯದಲ್ಲಿ ಮುಸ್ಲಿಂ ಆಳುವ ವರ್ಗ ಮತ್ತು ಊಳಿಗ ವರ್ಗಗಳು ಬಂದು ಸೇರಿದವು. ಅದೇ ಅವಧಿಯಲ್ಲಿ ಶ್ರೀರಂಗಪಟ್ಟಣಕ್ಕೆ ಐರೋಪ್ಯರ ಸಂಪರ್ಕವು ಲಭಿಸಿತು. ಹೀಗೆ ಸಾಮಾಜಿಕವಾಗಿ ಪೌರಾತ್ಯ ಮತ್ತು ಪಾಶ್ಚಿಮಾತ್ಯ ವಿಶೇಷಗಳನ್ನು ಈ ನಗರ ಪಡೆದುಕೊಂಡಿತು. ಆದಾಗ್ಯೂ ಪ್ರಧಾನ ವಾಗಿ ಅಲ್ಲಿನ ಸಮಾಜದಲ್ಲಿ ಆಚರಣೆಯಲ್ಲಿದ್ದಿದು ವರ್ಣವ್ಯವಸ್ಥೆ ಮತ್ತು ಜಾತಿವ್ಯವಸ್ಥೆ ಎಂದು ಹೇಳಬಹುದು. ಈ ಶ್ರೇಣೀಕೃತ ವ್ಯವಸ್ಥೆಯ ಅಗ್ರಸ್ಥಾನದಲ್ಲಿ ಬ್ರಾಹ್ಮಣರು ಇದ್ದರು.

ಶ್ರೀರಂಗಪಟ್ಟಣದಲ್ಲಿ ಬ್ರಾಹ್ಮಣ ವರ್ಗ ಪ್ರತಿಷ್ಟೆಯ ವರ್ಗವಾಗಿತ್ತು. ಸಮಾಜದಲ್ಲಿ ಅವರ ಸ್ಥಾನಮಾನ ಹಿರಿದಾಗಿತ್ತು. ಬ್ರಾಹ್ಮಣರು ವಿವಿಧ ರೀತಿಯ ಗೋತ್ರ ಮತ್ತು ಸೂತ್ರಗಳಿಂದ ಗುರುತಿಸ ಲ್ಪಡುತ್ತಿದ್ದರು. ಈ ಗೋತ್ರ ಮತ್ತು ಸೂತ್ರಗಳು ಅವರ ವಿಶಿಷ್ಟ ಸ್ಥಾನಕ್ಕೆ ಸಂಕೇತಗಳಾಗಿದ್ದವು. ಶ್ರೀರಂಗಪಟ್ಟಣದ ಶಾಸನಗಳಲ್ಲಿ ಕಂಡು ಬರುವ ಕೆಲವು ಗೋತ್ರ ಮತ್ತು ಸೂತ್ರಗಳನ್ನು ಇಲ್ಲಿ ನೀಡಬಹುದು.

| ಕ್ರ. ಸಂ. | ಗೋತ್ರ ಮತ್ತು ಸೂತ್ರದ ಹೆಸರು | ಶಾಸನದ ಸಂಖ್ಯೆ | ಶಾಸನದ ಕಾಲ |
|---|---|---|---|
| 1 | ಆತ್ರೇಯ ಗೋತ್ರ, ಆಶ್ಲಾಯನ ಸೂತ್ರ | E.C.6 (N.S) ಶ್ರೀ.ಪ.23 | 1664 ಎ.ಡಿ |
| 2 | ಆತ್ರೇಯ ಗೋತ್ರ, ಆಶ್ಲಾಯನ ಸೂತ್ರ | ಅದೇ ಶ್ರೀ ಪ.24 | 1686 ಎ.ಡಿ |
| 3 | ಕೌಶಿಕ ಗೋತ್ರ | ಅದೇ ಶ್ರೀ. ಪ.66 | – |

| | | | |
|---|---|---|---|
| 4 | ಸೂಪರ್ನಾಸ ಗೋತ್ರ, ಕಾತ್ಯಾಯನ ಸೂತ್ರ | ಅದೇ ಶ್ರೀ.ಪ.39 | 1864 ಎ.ಡಿ |
| 5 | ಹಾರೀತ ಗೋತ್ರ | ಅದೇ ಶ್ರೀ.ಪ.82 | 1847 ಎ.ಡಿ |
| 6 | ಕಾಶ್ಯಪ ಗೋತ್ರ, ಆಪಸ್ತಂಭ ಸೂತ್ರ | ಅದೇ ಶ್ರೀ.ಪ.30 | 1841 ಎ.ಡಿ |
| 7 | ಭಾರ್ಗವ ಗೋತ್ರ, ಜೇಮಿನಿ ಸೋತ್ರ, ಮಧಾತ್ರೇಯ ಗೋತ್ರ, ಆಪಸ್ತಂಭ ಸೂತ್ರ | ಅದೇ ಶ್ರೀ ಪ.22 | 1662 ಎ.ಡಿ |
| 8 | ಕಾಶ್ಯಪ ಗೋತ್ರ | ಅದೇ ಶ್ರೀ.ಪ.1 | 9ನೇ ಶತಮಾನ |
| 9 | ಭಾರದ್ವಾಜ ಗೋತ್ರ | ಅದೇ ಶ್ರೀ ಪ.21 | 1447 ಎ.ಡಿ |
| 10 | ಆತ್ರೇಯ ಗೋತ್ರ, ಉರುಳ್ ಗೋತ್ರ | ಅದೇ ಶ್ರೀ ಪು.8 | 1528 ಎ.ಡಿ |
| 11 | ಆತ್ರೇಯ ಗೋತ್ರ, ಆಶ್ಲಾಯಣ ಸೂತ್ರ | ಅದೇ ಶ್ರೀ ಪ.71 | 1598 ಎ.ಡಿ |

ಬ್ರಾಹ್ಮಣರಲ್ಲಿ ಅನೇಕ ಪಂಗಡಗಳಿದ್ದವು. ಅವುಗಳ ಪೈಕಿ ಶ್ರೀ ವೈಷ್ಣವರು[1] ಅಥವಾ ಅಯ್ಯಂಗಾರರು[2] ಒಂದು ಪ್ರತ್ಯೇಕ ಪಂಗಡಕ್ಕೆ ಸೇರಿದವರಾಗಿದ್ದರು. ಇವರು ಹೆಚ್ಚಾಗಿ ತಮಿಳುನಾಡಿನಿಂದ ಬಂದವರಾಗಿದ್ದರು ಮತ್ತು ತಮಿಳನ್ನು ಮನೆಯಲ್ಲಿ ಬಳಸುತ್ತಿದ್ದರು. ಶ್ರೀರಂಗಪಟ್ಟಣದ ಶಾಸನಗಳೂ ಇವರನ್ನು ಪ್ರತ್ಯೇಕವಾಗಿ ಗುರ್ತಿಸುತ್ತವೆ.

ಶ್ರೀ ವೈಷ್ಣವರಲ್ಲದೆ ಅಗ್ರಹಾರದಲ್ಲಿ ಬ್ರಾಹ್ಮಣರನ್ನು ಮಹಾಜನರೆಂದು ಕರೆಯುತ್ತಿದ್ದರು.[3] ಇವರಲ್ಲಿ ಅನೇಕರು ಸ್ಮಾರ್ಥ ಅಥವಾ ಶೈವ ಸಂಪ್ರದಾಯಕ್ಕೆ ಸೇರಿದ ಬ್ರಾಹ್ಮಣರಾಗಿದ್ದರು.

ಬ್ರಾಹ್ಮಣರಂತೆ ಆಳುವ ವರ್ಗಕ್ಕೆ ಸೇರಿದ ಒಡೆಯರು ಸಮಾಜದಲ್ಲಿ ಉನ್ನತ ಸ್ಥಾನಗಳನ್ನು ಗಳಿಸಿದ್ದರು. ಇವರು ಸಹ ವೈದಿಕ ಧರ್ಮವನ್ನು ಅನುಸರಿಸುತ್ತಿದ್ದರು. ಜನಿವಾರವನ್ನು ಹಾಕಿಕೊಳ್ಳುತ್ತಿದ್ದರು. ಇದಲ್ಲದೆ ಸಮಾಜದಲ್ಲಿ ವಿವಿಧ ರೀತಿಯ ಶೂದ್ರ ವರ್ಗಗಳು ಇದ್ದವು. ಅವರ ಪೈಕಿ ಮಾರರು, ಒಳಂಳ ಶೂದ್ರರು, ಕಲಿನೀತಿ ಗಾಣಿಗರು, ಕುಂಬಾರರು,[4] ನಾಯಿಂದರು ಮತ್ತು ಇತರರನ್ನು ಹೆಸರಿಸಬಹುದು.[5] ವೈಶ್ಯರು ವ್ಯಾಪಾರದಲ್ಲಿ ನಿರತರಾಗಿದ್ದರು.

ಶ್ರೀರಂಗಪಟ್ಟಣದಲ್ಲಿ ಜೀವಿಸುತ್ತಿದ್ದ ಬ್ರಾಹ್ಮಣರು, ವಿದ್ವಾಂಸರು ಆರು ದರ್ಶನ ಶಾಸ್ತ್ರಗಳು, ನಾಲ್ಕು ವೇದ ಮತ್ತು 18 ಪುರಾಣಗಳಲ್ಲಿ ಪ್ರಾವೀಣ್ಯತೆಯನ್ನು ಸಂಪಾದಿಸಿದ್ದರು.[6] ಗೋವಿಂದ

ವೈದ್ಯನು "ಆರು ಶಾಸ್ತ್ರವು, ನಾಲ್ಕು ವೇದ, ಪುರಾಣದ ಸಾರದರ್ಥವ ನಿರ್ಣೈಸಿ ತೋರಿ ವಾಚಿಸುವ ಬ್ರಾಹ್ಮಣ ವೀದಿ ಬಹು ಶೃಂಗಾರದ ಮೆರೆದು ವರ್ತಿಸಲಿ", ಕರ್ತೃವಾದ ಗೋವಿಂದ ವೈದ್ಯನು ಸಕಲ ಮಂತ್ರ ಶಾಸ್ತ್ರಗಳಲ್ಲೂ ವೇದಾಧ್ಯಯನದಲ್ಲೂ ಪ್ರಾಕಾಂಡ ಪಂಡಿತನಾಗಿದ್ದನು. ಕೌಶಿಕ ಗೋತ್ರದ ಎರಡನೇ ಸಿಂಗ್ರಐಂಗಾರ್ ನರಸಿಂಹ ಸೂರಿಯು ವೈಷ್ಣ ಸಾಹಿತ್ಯದಲ್ಲಿ ಮಹಾಪಂಡಿತನಾಗಿದ್ದನು. ಅವನಿಗೆ ಅಳಸಿಂಗಾಚಾರ್ಯ ಎಂಬ ಮತ್ತೊಂದು ಹೆಸರಿದ್ದಿತು. ಉಭಯ ವೇದಾಂತ, ತ್ರಿಭಾಷ್ಯ, ಶ್ರುತ ಪ್ರಕಾಶಿಕೆ, ಅಲಂಕಾರ ಶಾಸ್ತ್ರ, ವ್ಯಾಕರಣ, ಸ್ಮೃತಿ, ವೇದ ಮತ್ತು ವೇದಾಂತ, ಪುರಾಣ ಮತ್ತು ಮೂವತ್ತೆರಡು ಬ್ರಹ್ಮವಿದ್ಯೆಗಳನ್ನು ಚೆನ್ನಾಗಿ ಅರಿತು ಅವುಗಳ ಬಗ್ಗೆ ಅಧಿಕಾರಯುತವಾಗಿ ಮಾತನಾಡಬಲ್ಲಂತಹ ಜ್ಞಾನವನ್ನು ಪಡೆದಿದ್ದನು.[8]



ಸಾಮಾಜಿಕ ಜೀವನಕ್ಕೆ ಸಂಬಂಧಪಟ್ಟಂತೆ ಗೋವಿಂದ ವೈದ್ಯನು ಶ್ರೀರಂಗಪಟ್ಟಣಕ್ಕೆ ಸಂಬಂಧಿಸಿದ ಅನೇಕ ವಿವರಗಳನ್ನು ನೀಡಿದ್ದಾನೆ. ಅವುಗಳನ್ನು ಇಲ್ಲಿ ಪ್ರಸ್ತಾಪಿಸಬಹುದು. ಮುಖ್ಯವಾಗಿ ಗೋವಿಂದ ವೈದ್ಯನು ಚಿತ್ರಿಸಿದ ಅಂದಿನ ಜನಸಾಮಾನ್ಯರ ಆಚಾರ ವಿಚಾರಗಳನ್ನು ನಾವು ಸಹಜವಾಗಿ ಗುರುತಿಸಬಹುದು; 'ನದಿಯ ಉಭಯ ತಟಗಳೂ ಸ್ನಾನ, ಸಂಧ್ಯಾವಂದನೆ, ಜಪ, ತಪ ಇವುಗಳನ್ನೆಲ್ಲ ಮೌನದಿಂದ ಮಾಡುವ ಜ್ಞಾನಾಧಿಕರಿಂದ ಪರಿಶೋಭಿಸುತ್ತಿದ್ದವು.[9] ಚಾರುವಸನ, ಪೊಂಬಟ್ಟೆ, ಬಿಳಿಯ ವಸ್ತ್ರ, ಸಾರಪೊಪ್ಪಳಿ ಮೊದಲಾದ ಸೀರೆ ಸಹಿತ ಸ್ನಾನವನ್ನು ಮಾಡುವ ಬ್ರಾಹ್ಮಣ ಸ್ತ್ರೀಯರು ಇತ್ತಟಗಳಲ್ಲಿಯೂ ಕಾಣುತ್ತಿದ್ದರು.[10] ಅವರಲ್ಲಿಯ ಕೆಲವು ಚೆಲುವೆಯರು ಸ್ನಾನ ಮಾಡಿ 'ಕುಂಕುಮವನ್ನು ಹಣೆಗೆ ಇಡುತ್ತಿದ್ದರು'. ಬೇರೆ ಕೆಲವರು ಹರಿದ್ರದ ಪಂಕ (ಅರಿಸಿಣದ ಕಲ್ಕ) ವನ್ನು ಮೈಗೆ ಲೇಪಿಸುತ್ತಿದ್ದರು. ಅಲ್ಲಲ್ಲಿ ಅನೇಕ ಜನ ಐದೆಯರು, ಕಳಸಗಳನ್ನಿಕ್ಕಿ ಅರಿಶಿಣ, ಕುಂಕುಮ, ಗಂಧಾಕ್ಷತೆ, ಫಲಪುಷ್ಪ, ತಾಂಬೂಲ ಮೊದಲಾದ ಪೂಜಾ ದ್ರವ್ಯಗಳಿಂದ ಕಾವೇರಿಯನ್ನು ಪೂಜಿಸುತ್ತಿದ್ದರು. ಎಷ್ಟೋ ಕಡೆಗಳಲ್ಲಿ ಅಂಗನೆಯರು ಕಚಗಳ ಸಿಕ್ಕ (ಕೂದಲಿನ ತೊಡಕು) ಬಿಡಿಸುವ ಎಣೆಗಂಟಿಕ್ಕಿ, ಕುಚಮಧ್ಯದಲಿ ಹಾರವಿಡುತ, ವಿಚಲಿತ ನೇತ್ರಗಳಿಗೆ ಕಜ್ಜಲ (ಕಾಡಿಗೆ) ವನ್ನು ರಚಿಸುತ ಒಪ್ಪುತ್ತಿದ್ದರು. ಬ್ರಾಹ್ಮಣರ ಹುಡುಗಿಯರನೇಕರು ಹೊನ್ನ ತಂಬಿಗೆ, ಗಿಂಡಿ, ಪನ್ನೀರ, ಚೆಂಬು ಇವುಗಳಲ್ಲಿ ನೀರನ್ನು ತುಂಬಿಕೊಂಡು ಸುಸಜ್ಜಿತರಾಗಿ ಮನೆಗೆ ಹೋಗುತ್ತಿದ್ದರು.[11] ಅಲ್ಲದೆ ನದಿಯ ದಡದಲ್ಲಿ ಶಿವಭಕ್ತರ ಮೇಳವೂ ಕಂಗೊಳಿಸುತ್ತಿತ್ತು. ಅವರೆಲ್ಲ ಲಿಂಗಕ್ಕೆ ನೀರೆರೆದು ಅಂಗಕ್ಕೆ ವಿಭೂತಿಯನ್ನು ಲೇಪಿಸಿಕೊಳ್ಳುತ್ತಿದ್ದರು.[12] ಹರಿದಾಸರು 'ಹರಿವ ಜಲದೊಳಾಗ ಹರಿದು ಮಜ್ಜನವನು ಮಾಡಿ, ತಿರುನಾಮ ತಿರುಚೂರ್ಣಗಳ ಪಣೆ (ಹಣೆ) ಯೊಳಗಿಟ್ಟು[13]

ಹರಿಯನ್ನು ಧ್ಯಾನಿಸುತ್ತಿದ್ದರು. ಅಲ್ಲದೆ ಆ ನದಿಯ ಮಧ್ಯದಲ್ಲಿಯೂ, ಇಕ್ಕೆಡೆಗಳಲ್ಲಿಯೂ ಅನೇಕ ಮಂಟಪಗಳಿದ್ದು ಅವು ಶ್ರೀ ಹರಿಯ ಉತ್ಸವಕ್ಕೆ ಎಡೆಯಾಗಿರುತ್ತಿದ್ದವು.

ಶ್ರೀರಂಗಪಟ್ಟಣದಲ್ಲಿ ಅನೇಕ ಬೀದಿಗಳಿದ್ದವೆಂದು ಕವಿ ಗೋವಿಂದವೈದ್ಯ ತಿಳಿಸುತ್ತಾನೆ. ಬ್ರಾಹ್ಮಣರ ಬೀದಿ ಶ್ರೀರಂಗಪಟ್ಟಣದಲ್ಲಿದ್ದು ಅಲ್ಲಿ ಅನೇಕ ಜನರು, ವಿದ್ವಾಂಸರು, ಕವಿಗಳು, ಆಶ್ರಯದಾತರು, ಕರಣೀಕರು ವಾಸ ಮಾಡುತ್ತಿದ್ದರು. ಅಲ್ಲದೆ ಆ ಬೀದಿಯಲ್ಲಿ ವೈದ್ಯರು, ಗಾಯಕರು, ನಟ ನಾಯಕರು ಇದ್ದರು ಎಂದು ತಿಳಿಸುತ್ತಾನೆ. ಅಲ್ಲದೆ ಶ್ರೀರಂಗಪಟ್ಟಣದಲ್ಲಿ ಇನ್ನೂ ಅನೇಕ ಬೀದಿಗಳೂ ಇದ್ದವೆಂದು ಕವಿ ತಿಳಿಸುತ್ತಾನೆ. ನಗರದಲ್ಲಿ ವರ್ತಕರ ಮನೆಗಳಿದ್ದವು. ಇವರು ಮೋಸವನ್ನು ಮಾಡದೆ ಧರ್ಮಮಾರ್ಗದಿಂದ ನಾನಾ ಬಗೆಯ ವಸ್ತುಗಳನ್ನು ಮಾರುತ್ತಿದ್ದರು. ಒಕ್ಕಲಿಗರ ಕೇರಿಯಿದ್ದು ಅವರೆಲ್ಲ ಸೋಂಬೇರಿಗಳಾಗಿ ಕಾಲ ಕಳೆಯುತ್ತಿರಲಿಲ್ಲವೆಂದೂ 'ಅಕ್ಕರೊಳಗೆ ಬಹು ಬಗೆಯ ಧಾನ್ಯಗಳನ್ನು ಚೊಕ್ಕಟವಾಗಿಯೇ ಬೆಳೆದು ಒಗ್ಗಟ್ಟಿನಿಂದ ಧರ್ಮಮಾರ್ಗದಿಂದ ಜೀವಿಸುತ್ತಿದ್ದರು'[14] ಎಂದು ತಿಳಿಸುತ್ತಾನೆ. ಶಿವಭಕ್ತ (ವೀರಶೈವ) ರದೊಂದು ಕೇರಿಯೂ ಅಲ್ಲಿದ್ದಿತು. ಅವರು "ಕ್ಷುದ್ಬಾಧೆಯೊಳು ಐತಹ ಚರಲಿಂಗ ನಿವಹವ ಕರೆದೊಯ್ದು ತವಕದೆ ಮೃಷ್ಟಾನ್ನವಿತ್ತು."[15] ತಣಿಸುತ್ತಿದ್ದರು.

ಗಂದಿಗರು, ಬೋಗಾರರು, ತಿಲಗಾತಕ (ಗಾಣಿಗ)ರು, ತಾಮ್ರ ಮರ್ದಕರು, ಮಲ್ಲರು, ಜಾಲಗಾರರು ಮೊದಲಾದ ಜಾತಿಯವರು ಅಲ್ಲಿ ವಾಸಿಸುತ್ತಿದ್ದರು. ಚಿತ್ರಿಗರದೊಂದು ಕೇರಿಯಿದ್ದಿತು; ಅಂದರಂತೆಯೇ ನಾನಾ ಬಗೆಯ ಸೇಲಿಗರ ಕೇರಿಗಳೂ; ಸಿರತಾಳಿ, ಜೋಡು, ಪೈಠಣಿಗಳ ಹೊಲಿಗೆಯ ಗರುವ ಚಿಪ್ಪಿಗರ ಕೇರಿಗಳು ಇದ್ದವು. ತಾಳಧಾರಿಗಳು, ಮದ್ದಳಿಗರು, ನಾಗಸರ – ಮೌರಿಯ ಅಲಾಪಿಗರು, ನಟುವಿಗರು, ಜೋಗಿಗರು, ಮುಚ್ಚಿಗರು[16] ಇವರೆಲ್ಲರ ಮನೆಗಳು ಸಾಲು ಸಾಲಾಗಿ ಇದ್ದವು. ಅರಮನೆಯ ಪರಿಚಾರತನಕ್ಕೆ ಬೇಕಾಗುವ ದೀವಟಿಗರು, ಕಟ್ಟಿಗೆಯವರು, ರಾವುತರು, ಮಾವುತರು ಮೊದಲಾದವರ ಮನೆಗಳು ಶ್ರೀರಂಗಪಟ್ಟಣದಲ್ಲಿ ತುಂಬಿರುತ್ತಿದ್ದವು. "ಕಟ್ಟಾಣಿ ಮುತ್ತಿನ ಚೌಕುಳಿ, ಕೊರಳೊಳಗಿಟ್ಟ ಪದಕ, ಚಂದ್ರಹಾರ; ತೊಟ್ಟ ದುಗುಲದ ಸ್ಯೆರಣೆ ಯೊಳಿಗದವರ ಕಟ್ಟೆ ಸಕದ ಕೇರಿಯಹುವು"[17] ಎಂದು ಕವಿ ತಿಳಿಸಿದ್ದಾನೆ.

ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಶ್ರೀರಂಗಪಟ್ಟಣದಲ್ಲಿ ಶೂರರಿದ್ದರು; ನೀತಿ ವಿಹಾರ ರಿದ್ದರು; ಸದ್ಗುಣಗಣಸಾರರಿದ್ದರು; ಸಕಲ ಕಲಾವಿದರಿದ್ದರು ಎಂದು ಹೇಳಬಹುದು.

ಶ್ರೀರಂಗಪಟ್ಟಣದಲ್ಲಿ ಅಂಗಡಿಗೇರಿಯನ್ನು ಕವಿ ಇದ್ದುದ್ದಿದ್ದಂತೆ ಬಣ್ಣಿಸಿದ್ದಾನೆ. ಅಂಗಡಿಗೇರಿಯಲ್ಲಿ "ರವಿ-ಶಶಿಬಿದಿ"ಗಳ ರಚನೆಯಿರುವುದೊಂದು ಪ್ರಾಚೀನ ನಗರ ರಚನಾ ಶಾಸ್ತ್ರದ ನಿಯಮವೇ ಆಗಿದೆ. ಪೇಟೆಯ ಒಂದು ಬದಿಯಲ್ಲಿ 'ಚಿನ್ನವರದರ' ಮಳಿಗೆಗಳು ಇದ್ದವು. ಅಲ್ಲಿನ ಚಿನ್ನವರದರು 'ಹರಸಖ(ಕುಬೇರ)ನು' ನವನಿಧಿಗಳನ್ನು ಈ ಪುರದೊಳಗೆ ಇರಿಸಿದನೆಂಬಂದದಲಿ ಪಿರಿದೆನಿಸುವ ಹೊನ್ನರಾಶಿಗಳಲಿ' ಪರಿಶೋಭಿಸುತ್ತಿರುವರು. ಇನ್ನೊಂದೆಡೆಯಲ್ಲಿದ್ದ ಮುತ್ತಿನ ಮಳಿಗೆಗಳಲ್ಲಿ ಬಿಳಿ ಮುತ್ತು, ಕೆನ್ನೀರ ಮುತ್ತು, ಕಟ್ಟಾಣಿ ತೋರದ ಮುತ್ತು ಮೊದಲಾದ ಜಾತಿ ಮುತ್ತುಗಳು ಇದ್ದವು. ಪವಳದ ಪಸರಗಳಲ್ಲಿ ಸಣ್ಣ ಪವಳ (ಹವಳ), ಕೈಕಟ್ಟಿನ ಪವಳ, ಬಣ್ಣ ಸರದ ಜತಿ ಪವಳ ಇವೆಲ್ಲ ಕಣ್ಣ ಕೊಕ್ಕರಿಸುತ್ತಿದ್ದವು. ಸಾಲುಗೊಂಡು ಎಸೆಯುತ್ತಿರುವ ಪಸರದಂಗಡಿಗಳಲ್ಲಿ ನೀಲದ ಮರ, ಮಾಣಿಕದ ಕುಚ್ಚು, ವಜ್ರದ ಮೇಲುಗೊಂಚಲು, ವೈಡೂರ್ಯ ಇವೆಲ್ಲ ರಾರಾಜಿಸುತ್ತಿದ್ದವು. ಇನ್ನೊಂದೆಡೆಯಲ್ಲಿರುವ ಕಂಚುಗಾರರ ಪಸರಗಳಲ್ಲಿ ಮಿಂಚುವ ಪರಿವಾಣ ಚೆಂಬು-ಗಿಂಡಿಗಳೂ, ಸಾಲಂಚಿನ ಮಜ್ಜನಶಾಲೆ, ಪಂಚಾರತಿ, ಗಂಟೆಗಳೂ ತುಂಬಿರುತ್ತಿದ್ದವು. ಜವುಳಿಯ ಮಳಿಗೆಗಳಲ್ಲಿ "ಪಟ್ಟೆಯ ಸುರುಳು, ಸೂರಿಯಪುಟಿ, ಹೊಸಹೊನ್ನದಟ್ಟಿ, ಬಳಿಯದುಕೂಲ" ಇವು ದಿಟ್ಟಿ ಗಚ್ಚರಿಯಾಗಿ ಕಾಣುತ್ತಿರುವುವು; ಇಷ್ಟೇ ಅಲ್ಲದೆ ಆ ಮಳಿಗೆಗಳಲ್ಲಿ ಹಳದಿ, ಪೊಪ್ಪಳಿ, ಚಂದ್ರಗಾವಿ, ಬೊಂಬೆಯ ಬಣ್ಣ, ಸುಲಿಪಲ್ಲು, ಹೊನ್ನ ತಗಡಿನ ಬಿಳುವಟ್ಟೆ' ಮೊದಲಾದ ನಾನಾ ವರ್ಣದ ಜವುಳಿಗಳು ಅಂದವನ್ನು ಹೆಚ್ಚಿಸುತ್ತಿದ್ದವು ಎಂದೂ ಹೇಳುತ್ತಾ" ಕರೆದರಾ ಎನುತಾಗ ಸಿರಿದೇವಿ ಆ ಪುರದರಸಿನ ಮಂದಿರದೊಳಗೆ ಸ್ಥಿರವಾಗಿ ನೆಲಸಿಹಳಂಗಡಿಗೇರಿಯ ಪಿರಿದು ಭಾಗ್ಯವ ನೀನ ಸೆಂಬೆ"[18] ಎಂದು ಕವಿ ಬಣ್ಣಿಸುತ್ತಾನೆ.

ಪೇಟೆಗೆ ಬರುವ ಹಳ್ಳಿ ಜನರಿಗೆ ನೀರು ಹನಿಸುವುದಕ್ಕೆಂದು 'ಶಶಿ-ರವಿ ಬೀದಿಯ ಸಾಲಸೆಜ್ಜೆಗಳ ಬಾಗಿಲಲಿ, ನೀಲಕುಟ್ಟಿಮದ ಅರವಟ್ಟಿಗೆಗಳು' ಇದ್ದವು.[19] ಅಲ್ಲಿ ಬಾಲೆಯರು ನೀರೆರೆಯುತ್ತಿರುವರು. ಅವರನ್ನು ಸಮೀಪಿಸಿಯೇ ಬೆಳ್ಳೆಲೆಗಳನ್ನು ಮಾರುವ ನೀಲಾಳಕಿಯರೂ, ಕತ್ತುರಿ, ಸೇವಂತಿಗೆ, ದುಂಡುಮಲ್ಲಿಗೆ, ಬಾಜಿ, ಸಂಪಿಗೆ ಮೊದಲಾದ ಹೂಗಳನ್ನು ಮೂಲೆಗಟ್ಟಿ ಮಾರುವ ಹೆಂಗಸರೂ ಕುಳಿತ್ತಿರುತ್ತಿದ್ದರು. ಇನ್ನೊಂದೆಡೆಯಲ್ಲಿ 'ಪುಣುಗು, ಕಸ್ತೂರಿ, ಕುಂಕುಮ, ಸಿರಿಗಂಧ'ಗಳನ್ನೆಲ್ಲ 'ಮಣಿವಟ್ಟಲೊಳು ಹದಮಾಡಿ ಕ್ಷಣದೊಳು ಕ್ರಯಕೀವ ಗಟ್ಟಿವಳ್ತಿಯರ ಸಂದಣಿ' ಮೆರೆಯುತ್ತಿತ್ತು.[20] ಈ ಬೀದಿಗೆ ಹತ್ತಿರವಾಗಿಯೇ 'ಸೂಳೆಗೇರಿ'[21] ಇರುವುದು. ಈ ಸೂಳೆಗೇರಿಯ ಸಾಲಭವನದ ಮಳಿಗೆಗಳೊಳಗೆ ಗಿಳಿಯ ಪಂಜರ, ಪಾರಿವಾಳಗಳ ಪೊಂಗೂಡು,

ಕಳಕಂಠ–ಕೇಕಿಯ ದೀಹ ಇವೆಲ್ಲ ರಾರಾಜಿಸುತ್ತಿದ್ದವು. ಅನೇಕ ಜನ ಸೂಳೆಗಾರರು ಸಿಂಗರಿಸಿ ಕೊಂಡು, ತಗುರು ಸಿಪಿಲೆ ಕೋಳಿಗಳ ಕಾಳಗದ ನೆಪದಿಂದಲೂ, ಪಗಡೆ ಜೂಜುಗಳಾಟದ ನೆಪದಿಂದಲೂ ಯಾವಾಗಲೂ ತಿರುಗಾಡುತ್ತಿದ್ದರು.

ಕವಿ ಗೋವಿಂದ ವೈದ್ಯನು ಅರಸು ಮಕ್ಕಳ ಆಟಪಾಠಗಳ ಬಗ್ಗೆ ವರ್ಣನೆ ಮಾಡುತ್ತಾ; ಇಲ್ಲಿಯ ರಾಜಕುಮಾರರನೇಕರು 'ತೇಜಿಗಳನು ಕುಣಿಸುವರು; ಕಲಭ (ಆನೆಮರಿ) ವನು ಮಾಜದೆ ಬೀದಿವರಿಸುವರು'. ಕೆಲವು ಜನ ರಾಜಪುತ್ರರು ಟಗರಿನ ತಲೆಗೆ ಜಂಬೀರ (ಲಿಂಬೆ) ದ ಪುಳಿಯಿಟ್ಟು ಮಿಗೆ ನಸೆಯೇರಿಸಿ, ನಗುತ ಜಗಳವ ನೋಡುತ್ತಿದ್ದರು. ಮತ್ತೆ ಕೆಲವರು ಕುಕ್ಕುಟಿಗಳ (ಕೋಳಿಗಳ) ಕಾಲ್ಗೆ ಚೀಲಾಯುಧವಿಕ್ಕಿ, ಸೊಕ್ಕುಮದ್ದಿನ (ನಸೆಯೇರುವ) ಗುಟುಕಿತ್ತು, ಉಕ್ಕಂದ (ಉತ್ಸಾಹ)ದ ನೋಡುತ್ತಿದ್ದರು. ಬೇರೆಯ ಕೆಲವರು ಸಿಪಲೆ, ಗೌಜಲ ಹಕ್ಕಿಗಳ ಕಾಳಗವನ್ನಾಡಿಸುತ್ತಿದ್ದರು; ಜಾತಿಯ ಹುಂಜಗಳ ಕಾಲುಗಳಿಗೆ ಗಗ್ಗರವನ್ನು ಹಾಕಿ ಕಾಳಗಕ್ಕೆ ಬಿಡುತ್ತಿದ್ದರು. ಅಲ್ಲದೆ ಧೂಳಿಯ ನೆಲದೊಳು ಕೇಳಿಯ ಚೌಕ (ಆಟಕ ಕಳ)ವ ಮಾಡಿ, ಗೂಳಿಗೂಳಿಗಳಲ್ಲಿ ಕಾಳಗವನ್ನಾಡಿಸುತ್ತಿದ್ದರು. ಸಾಧನೆಗೈದು, ದೇಹದೊಳಿರುವ ಜಲವ ಮೇಲೆ ಧರಿಸಿ, ಮಿರುಪ ಕುಂಕುಮವಸನದ ಕೈಸಾಣೆಯ' ಹಲವು ಜನ ದೊರೆಗಳ ಕುವರರು ಅಲ್ಲಿ ತಿರುಗಾಡುತ್ತಿದ್ದರು. ಅವರೆಲ್ಲ ಬೇರೆ ಬೇರೆ ಶಸ್ತ್ರಾಸ್ತ್ರಗಳ ಸಾಧನೆಯನ್ನು ಜೋಕಿನ ಪಟ (ದಾಂಡಪಟ) ವನ್ನೂ, ಕತ್ತಿ–ಕಠಾರಿ–ದೊಣ್ಣೆಯ ವರಸೆಯನ್ನು ತೋರಿಸುತ್ತಿದ್ದರು[22] ಎಂದೂ ವರ್ಣಿಸುತ್ತಾನೆ.

ಅಲ್ಲದೆ ಕವಿಯ ಕಂಠೀರವ ನರಸರಾಜನ ಅರಮನೆ, ಅಲ್ಲಿಯ ಬೇರೆ ಬೇರೆ ಭಾಗಗಳ ಬಗ್ಗೆ ವಿವರಿಸುತ್ತಾ; ಕಂಠೀರವ ನರಸರಾಜನ ಅರಮನೆಗೆ ನೆಲೆಯುಪ್ಪರಿಗೆಗಳು ಅವುಗಳಲ್ಲಿ ಚೌದೆಸೆಯ ಉಪ್ಪರಿಗೆಗಳು, ಜಯಸಿರಿ, ಭಾಗ್ಯಸಿರಿ, ಶಾರದಲಕ್ಷ್ಮಿ, ಧೈರ್ಯಲಕ್ಷ್ಮಿಯರ ಮುಖಾಬ್ಜದಂತೆ ಮೆರೆಯುತ್ತಿದ್ದವು. ಈ ದವಳದುಪ್ಪರಿಗಳ ಅಂತರಾಂತರದ ಬಿತ್ತಿಯಲಿ ಮೋಹ ರಸವ ಸೂಸುತ, ಚೆಲ್ವಾಂತ ಪುತ್ತಳಿಗಳು' ಒಪ್ಪುತ್ತಿದ್ದವು. ಆ ಪುತ್ತಳಿಗಳೆಂದರೆ ಏನೋ ಕೆಲಸಕ್ಕೆ ಬಾರದ ಗೊಂಬೆ ಗಳಲ್ಲ; ಭಾರತ, ರಾಮಾಯಣ, ಭಾಗವತ, ಕಥಾ ಸಂದರ್ಭಗಳನ್ನು ಪ್ರದರ್ಶಿಸುವಂತಹವೂ, ಶೃಂಗಾರ ರಸಪೂರಿತವಾದ ಕಾವ್ಯ ನಾಟಕದಲ್ಲಿಯ ಕಥಾ ಸೂಚಕವಾದವೂ ಇದ್ದವು. ಅಲ್ಲದೆ ಅರಸಂಚೆ, ಸೋಗೆ ನವಿಲು, ಬಣ್ಣಗೋಗಿಲೆ, ಗಿಳಿಚಕ್ರವಾಕ, ಮೊದಲಾದ ಪಕ್ಷಿಗಳ ಪ್ರತಿಮೆಗಳು ಅಲ್ಲಿ 'ಸ್ಮರಧೀರನ ಬಲದಂತೆ' ಕಂಗೊಳಿಸುತ್ತಿದ್ದವು. ಆನೆ, ವರಾಹ, ಕಾಳ್ಕೋಣ, ವೇರ್ಬುಲಿ,

ಸಿಂಹ, ಹರಿಣ, ಭೇರುಂಡ ಮೊದಲಾದ ನಾನಾ ಬಗೆಯ ಮೃಗಗಳ ಪ್ರತಿಮೆಗಳ ಹರ್ಮ್ಯಗಳಲ್ಲಿ ಪರಿಶೋಭಿಸುತ್ತಿದ್ದವು[23] ಎಂದೂ ಬಣ್ಣಿಸುತ್ತಾ ಹೊರಭಾಗವನ್ನು ಕಣ್ಣಿಗೆ ಕಟ್ಟಿದಂತೆ ಬಣ್ಣಿಸಿದ್ದಾನೆ. ಅಲ್ಲಿಯ ಒಂದೊಂದೆ ಭಾಗವನ್ನೇ ವಿವರಿಸುತ್ತಾ; ಅಲ್ಲಿಯ ಕಂಬಗಳಲ್ಲಿ ಹೊಂದಗಡುಗಳಲ್ಲಿ ಹುದುಗಿ ನಿಂತಂತಹವು. 'ಪಟ್ಟೋಳಿಯ (ರೇಶಿಮೆಬಟ್ಟೆ) ಸರಗೊಂಡೆಯದ ಲೋವೆಯಿಂದ[24] ಅಂದವಡೆದ ಹಜಾರವದು. ಮುಂದೆ 'ಚಿತ್ರಶಾಲೆ' ಇರುವುದು. ಅದು 'ಸುರಪನ ಆಸ್ಥಾನ ಮಂಟಪದ ಶೃಂಗಾರದ ಪರಿವಿಡಿಯ'[15] ಸೋಲಿಸಿ ಬಿಡುವಂತಹದು. ಅಲ್ಲಿಂದ ಮುಂದೆ ಹೋದರೆ 'ಲಕ್ಷ್ಮಿವಿಲಾಸ ವಿರುವುದು. ಮುಂದೆ ಒಂದು ಕಡೆಗೆ 'ದುರ್ಗ ಮಂಟಪ' ಇನ್ನೊಂದು ಕಡೆಗೆ 'ಶಾರದಾಮಂಟಪ.' ಈ ಶಾರದಾ ಮಂಟಪದಲ್ಲಿ ಗಿರಿಜಾಕಲ್ಯಾಣದ ಕಥೆಯನ್ನು ಒಳಗೊಂಡ 'ಚಾರುತನದ ಚೆಲ್ವ ಚಿತ್ತರಗಳು' ಇರುವುವು.[26] ನಾಟಕ ಶಾಲೆಯಲ್ಲಿ ಅರಗಿಳಿ, ನವಿಲು, ಕೋಗಿಲೆ, ಕೊಂಚೆ, ಕೊಳವನಕ್ಕಿ ಮೊದಲಾದವುಗಳ ಪ್ರಣಯ ಜೀವನವನ್ನು ಸುರನಾರಿಯರ ವಿಲಾಸಗಳನ್ನು ರೂಪಿಸಿದ ಪುತ್ತಳಿ ಗಳಿರುವುವು. ಅದಕ್ಕೆ ಸಮೀಪದಲ್ಲಿಯೇ 'ಇಂದಿರಾ ಮಂದಿರ' ವಿರುವುದು. ಮುಂದಕ್ಕೆ ಹೋದರೆ ನಡುವೆ 'ಬಂಗಾರ ಚೌ; ಸಿಕ್ಕುವುದು, 'ಮದನ ವಿಲಾಸ'ದ ಸೊಬಗನ್ನಂತು ಕವಿ ತುಂಬಾ ವರ್ಣಿಸಿದಿದ್ದಾನೆ. ಅಲ್ಲಿ 'ಚಾರಾಸೀತಿ (ಎಂಬತ್ನಾಲ್ಕು) ಬಂಡ'ದ ವಿವಿಧ ರೀತಿಯ ತೋರಿ ಮೇರೆವ ಎಲ್ಲವನ್ನು ವಸ್ತುಗಳಿಂದ ಮುಚ್ಚಿದ ಪ್ರತಿಮೆಗಳಿದ್ದವು. ಅದಕ್ಕೆ ಪಕ್ಕದಲ್ಲಿಯೇ 'ಸೌಂದರ್ಯ ನಿಳಯ' ಮತ್ತೊಂದೆಡೆಯಲ್ಲಿ 'ವಿಜಯಭವನ' ಬರುವುದು. ಅರಮನೆಯಲ್ಲಿ ರಾಣಿಯರಿಗಾಗಿ ನಿರ್ಮಿತವಾದ 'ನವರತ್ನದ ತೊಟ್ಟಿ'ಗಳಿರುತ್ತಿದ್ದವು. ನಾಟಕ ಶಾಲೆಯ ಅಬಲೆಯರ ಮಣಿಯ ಭುವನಗಳು ಅಲ್ಲಿ ಇದ್ದವು. ಇವರಲ್ಲಿಯ ಅನೇಕರು ಜ್ಯೋತಿಷ್ಯ, ಕಾವ್ಯ, ನಾಟಕಶಾಸ್ತ್ರ, ಸಂಗೀತದಲ್ಲಿ ಪರಿಣತ ರಾಗಿದ್ದರು.

ಕಂಠೀರವ ನರಸರಾಜನು ನಿತ್ಯವೂ "ರಾಮಕಥೆಯಲ್ಲಿ ರವಿಕುಲದ ಅವನಿಪರುಗಳ ಪ್ರತಾಪ" ಕೇಳುತ್ತಿದ್ದನು ಎಂದು ಕವಿ ತಿಳಿಸುತ್ತಾನೆ. ಕಂಠೀರವನು ಶ್ರೀರಂಗಪಟ್ಟಣದ ಶ್ರೀರಂಗನಾಥ, ನರಸಿಂಹ ದೇವರುಗಳ ದೇವಾಲಯದಲ್ಲಿ ಕಾಲಕಾಲಕ್ಕೆ ತಕ್ಕ ಪೂಜೆಗಳು, ಸೇವೆಗಳೂ ನಡೆಯುವಂತೆ ಏರ್ಪಾಡನ್ನು ಮಾಡಿದ್ದನು. ಆದುದರಿಂದಲೇ ಅಲ್ಲಿ ಪಕ್ಷೋತ್ಸವ – ಮಾಸೋತ್ಸವಗಳಲ್ಲಿ ಪಲ್ಲಕ್ಕಿ ಸೇವೆ ನಡೆಯುತ್ತಿದ್ದವು. ಕರಿರಾಜ ತಿರುನಾಳು, ಸಂಕ್ರಮಣದ ತಿರುನಾಳು ಇವೆಲ್ಲ ಉತ್ಸವಗಳೂ ಅಚ್ಚುಕಟ್ಟಾಗಿ ನಡೆಯುತ್ತಿದ್ದವು. ಈ ವೀರವೈಷ್ಣವ ದೇವಾಲಯಗಳಂತೆಯೇ ರಾಜಧಾನಿಯಲ್ಲಿ ದೊಡ್ಡ ಹಂಪಯ್ಯನ ಮಠ, ಮೂಲೆಯ ಮಠ, ವಿರಕ್ತ ಮಠ, ದಾಸೋಹದ ಮಠ ಮೊದಲಾದ

ವೀರಶೈವ ಧರ್ಮಸಂಸ್ಥೆಗಳೂ ವ್ಯವಸ್ಥಿತವಾಗಿ ನಡೆಯುತ್ತಿದ್ದವು. ರಾಜಧಾನಿಯ ಜನರಿಗೆಲ್ಲ ಗೊತ್ತಾಗುವಂತೆ ಗೋಪುರದೊಳಗೆ ಗಡಿಯಾರ-ಜಾಗಟೆ' ಸಮಯಕ್ಕೆ ಸರಿಯಾಗಿ ನುಡಿಯುತ್ತಿದ್ದಿತು.

ಶ್ರೀರಂಗಪಟ್ಟಣದಲ್ಲಿ ಅರಸರ ನಿತ್ಯದೋಲಗದ ವೈಖರಿಯನ್ನು ಗೋವಿಂದ ವೈದ್ಯನು ತನ್ನ ಕಾವ್ಯದಲ್ಲಿ ಹೃದಯಂಗಮವಾಗಿ ಬಣ್ಣಿಸಿದ್ದಾನೆ. ಕಂಠೀರವ ನರಸರಾಜ ಒಡೆಯರು ಸಾಮಾನ್ಯವಾಗಿ ತಮ್ಮ ಓಲಗವನ್ನು 'ರವಿ ಪಶ್ಚಿಮ ಲಲನೆಯ ರತಿಕೇಳಿಗೊಲಿದು ನಲವಿಂದ ತೆರಳಿದ' ರಾತ್ರಿಯ ಹೊತ್ತು ನಡೆಸುತ್ತಿದ್ದರು. 'ನವನಾರೀ ಕುಂಜರ', 'ಪಂಚನಾರೀ ತುರಂಗದ ಹೊನ್ನ ಕಂಬ'ಗಳಿಮದ ಮೆರೆಯುವ ಲಕ್ಷ್ಮೀವಿಲಾಸವೆಂಬ ಭವ್ಯ ಸಭಾಮಂದಿರದಲ್ಲಿ ಓಲಗ ನಡೆಯುತ್ತಿದ್ದಿತು. ಓಲಗ ಸಾಲೆಯ ನಾಲ್ಕು ಬಿತ್ತಿಗಳು, 'ಹರಿಯ ನಾಟಕ ಮನಸಿಜನ ವಿಲಾಸದ ಪರಿವಿಡಿಗಳ ಪುತ್ತಳಿ' ಗಳಿಂದ ಕಂಗೊಳಿಸುತ್ತಿದ್ದವು. ಒಡೆಯರು ಸಪರಿವಾರವಾಗಿ ಸಭೆಗೆ ಆಗಮಿಸಿ 'ಹಂಸತೊಳದ ತಲ್ಪವನ್ನು ಹಚ್ಚಡಿಸಿ', ಒತ್ತು ವೊರಗುಗಳಿಂದ ಸಜ್ಜುಗೊಳಿಸಿದ ರತ್ನ ಸಿಂಹಾಸನದಲ್ಲಿ ಅಸೀನ ರಾಗುತ್ತಿದ್ದರು. ಅಷ್ಟರಲ್ಲಿ ಕೊಂಬು, ಕೊಳಲು, ನಾಗಸರ, ಭೇರಿ, ತಂಬಟೆ, ಬೊಂಬುಳಿ, ಬುರುಗು, ಡಿಂಡಿಮ ಮೊದಲಾದ ವಾದ್ಯಗಳ ಮೊರೆತವು ಆಕಾಶವನ್ನು ತುಂಬಿದ್ದಿತು. ಆ ಸಮಯದಲ್ಲಿ ದೊರೆಗಳಿಗೆ 'ಎಳವೆಂಗಳು' ಚಾಮರವನ್ನು ಬೀಸತೊಡಗುತ್ತಿದ್ದರು.

ಸಭೆಗೆ ಆಹ್ವಾನಿತರಾದ ಗಾಯಕರು, ಕವಿಗಳು, ವೇದವಿದರು, ಶಾಸ್ತ್ರಜ್ಞರು, ಮಂತ್ರೋದ ಯಾಢ್ಯರು, ತಾರ್ಕಿಕರು, ವಾಚಕರು, ವಿನೋದಿಗಳು, ದಿಕ್ಕುದಿಕ್ಕಿನ ದೊರೆಗಳ ರಾಯಭಾರಿಗಳು, ರಾಯರಾವುತರು, ಕರಣಿಕರು, ದಳಪತಿಗಳು, ರಾಯಸವನೋದುತಿಹ ಬಲ್ಲವರು, ಮನ್ನೆಯರು, ಮಾಂಡಲೀಕರು, ತುಳಿಲಾಳುರಾಯರು (ಶರಣಾಗತ ರಾಜರು) ಮುಂತಾದವರು ಬಂದು ಸಭೆಯಲ್ಲಿ ಮಂಡಿಸಿದೊಡನೆ ಮಂತ್ರಿ, ದಳವಾಯಿ, ಸಾಮಂತರು ಮೊದಲಾದವರು ತಂತಮ್ಮ ವರದಿಗಳನ್ನು ಓದುತ್ತಿದ್ದರು. ತದನಂತರ ಸಭಾಸದರ ಮನಸ್ಸಂತೋಷೇಷಾರ್ಥವಾಗಿ ನಾಟ್ಯ, ತಂಬೂರ, ವೀಣಾದಿ ಸಂಗೀತ ಕಾರ್ಯಕ್ರಮವು ಜರುಗುತ್ತಿದ್ದವು. ಪುರಾಣೇತೀಹಾಸ, ನೀತಿಶಾಸ್ತ್ರ, ತರ್ಕ, ವ್ಯಾಕರಣ, ನಾಟಕಾದಿ ಕಲಾಶಾಸ್ತ್ರ ವಿಚಾರಗಳನ್ನು ಕುರಿತು ಚರ್ಚೆ ನಡೆಯುತ್ತಿದ್ದವು. ಭಾರತ ರಾಮಾಯಣಾಧಿ ಪುಣ್ಯ ಕಥಾಶ್ರವಣವೂ ಸಾಂಸ್ಕೃತಿಕ ಕಾರ್ಯಕ್ರಮಗಳು ಓಲಗದ ಅಂಗವಾಗಿದ್ದವು.[27]

ಗೋವಿಂದ ವೈದ್ಯನು ಶ್ರೀರಂಗಪಟ್ಟಣದ ಪರಿಸರದಲ್ಲಿ ವಾಸಿಸುತ್ತಿದ್ದ ಜನರ ಉಡಿಗೆ-ತೊಡಿಗೆಗಳ ಬಗ್ಗೆ ತನ್ನ ಕಾವ್ಯವದಲ್ಲಿ ಮನೋಜ್ಞವಾಗಿ ಬಣ್ಣಿಸುತ್ತಾ; ಮಾಂಡಲಿಕರು ತಾಲಿ, ಚೌಕುಳಿ, ಹೊನ್ನಸರ, ಮುತ್ತಿನ ಜೂಳೆಯ, ಕಡಗ, ಕಂಕಣ ಮೊದಲಾದ ತೊಡಿಗೆಗಳನ್ನುಟ್ಟು ಕೊಳ್ಳುತ್ತಿದ್ದರಲ್ಲದೆ, ಮೈಯಲ್ಲಿ ಪೈರಣೆಗಳನ್ನು ತೊಡುತ್ತಿದ್ದರೂ ಭಜದ ಮೇಲೆ ಮೇಲುದುಪ್ಪಟ ವಿರುತ್ತಿತ್ತು. ತಲೆಗೆ 'ಮುಂಡಾಸು'ಗಳನ್ನು ಸುತ್ತುತ್ತಿದ್ದರು. ನಾಯಕರು 'ಮುಂಗೈಯ ಮುರಿ, ಮುರಡಿಯ ಸರಪಳಿ, ಹೊನ್ನುಂಗರ, ತೋಳಬಾಪುರಿ'ಗಳಿಂದ ಸಿಂಗರಿಸಿಕೊಂಡಿರುತ್ತಿದ್ದರು. ರಾವುತರು 'ಕಾಯದೂಳಳವಟ್ಟ (ಮೈಗೆ ಹತ್ತಿಕೊಂಡಿರುವ) ಹೊನ್ನದಗಲೆ' ದಿವ್ಯಾಯತದ ಆಭರಣಗಳು, 'ಬಿರುದಿನ ಚಿಂದಿ'ಗಳಿಂದ ಕೂಡಿರುತ್ತಿದ್ದರು. ಸುಭಟರೆನಿಸಿ ಕೊಳ್ಳುವವರೆಲ್ಲ ಪಟ್ಟೆಯ ದಟ್ಟಿ, ಕುಂಕುಮಗಾಸೆಗಳನ್ನು ಉಟ್ಟಿರುತ್ತಿದ್ದರು. ಒಂಟೆಯ ಸವಾರರು 'ಉತ್ತರಿಗೆ, ಹೊನ್ನಸರ, ಗಂಟೆ ಸರಪಳಿ, ಮುತ್ತಿನ ಕಡುಕು'ಗಳಿಂದ ಕೂಡಿ ಇರುತ್ತಿದ್ದರು. ಮೈಗಾವಲೂಳಿಗದವರು, ಚಿನ್ನಡ, ಹರಡೆ, ಬಿರುದಿನ ಬೆಳ್ಳಿಯ ಕಟ್ಟಿನ ನೇಜೆಯ (ಬರ್ಜಿ)ಗಳನ್ನು ಕೈಯಲ್ಲಿ ಹಿಡಿದುಕೊಂಡು ಇರುತ್ತಿದ್ದರು.

ಹೆಂಗಸರು ಆಗಲೂ ತುಂಬ ಆಭರಣಪ್ರಿಯರಾಗಿದ್ದರೆಂದು ತೋರುತ್ತದೆ. ಆಗಿನ ಅವರ ಆಭರಣಗಳೆಂದರೆ, 'ಅಂಗುಟಕೆ-ವೀರಮುದ್ರೆ', ಹೊನ್ನಕಾಲುಂಗರ, ಪಿಲ್ಲಿ, ಮೆಂಟಿಕೆ, ಕಿರುಪಿಲ್ಲಿ, ಚರಣಪೆಂಡೆಯ, ಪಾಯಪಟ್ಟ, ಹೊನ್ನ ಗಂಟೆಸರ, ರನ್ನ ಬಲೆಯ ಉಡಿದಾರ, ಕಟಿಸೂತ್ರ, ಕಾಂಚೀ ದಾಮ, ಪುಸ್ತಿ, ಮುಕ್ತಾಳಿ, ರತ್ನಪದಕ, ರತ್ನದ ಬೊಟ್ಟು (ಮೂಗಿಗೆ) ಹರಳೋಲೆ ತ್ರಿಸಪ, ಮೂಗುತಿ, ಕಡಗ, ಕಂಕಣ, ಮುದ್ರೆಯುಂಗುರ, ಚೌಸುರ, ನೂಪುರ, ಕೊಪ್ಪು, ವೆಂಟೆಯ ಚೌಕುಳಿ, ಸರತಾತಿ, ಹೊಂಬಳೆ, ಜಡೆ ಬಂಗಾರ ಮೊದಲಾದ ಕೊರಳು, ಕಿವಿ, ಮೂಗು, ಸೊಂಟ, ಕಾಲು, ತಲೆಗಳ ಚೆಲುವನ್ನು ಹೆಚ್ಚಿಸಿಕೊಳ್ಳಲು ಧರಿಸುತ್ತಿದ್ದರು. ಅಲ್ಲದೆ 'ಮಿಸುವ ಸಂಪಗೆಗಾವಿ, ಸಂಧ್ಯಾವಳಿ, ಶುಭ್ರವಸನ, ಮೊದಲಾದ ಬಣ್ಣಬಣ್ಣದ ಸೀರೆಗಳನ್ನುಡುತ್ತಿದ್ದರು. ಸಂಗೆಯಂಚಿನ ರವಿಕೆ ಗಳನ್ನು ತೊಡುತ್ತಿದ್ದರು. ಸುಗಂಧ ದ್ರವ್ಯಗಳನ್ನು ಲೇಪಿಸಿಕೊಳ್ಳುತ್ತಿದ್ದರಲ್ಲದೆ, ಅವರು ದೇಹಾ ಲಂಕಾರಗಳಿಗೆ ಹೆಚ್ಚಿನ ಗಮನ ಕೊಡುತ್ತಿದ್ದರೆಂದು ತಿಳಿದು ಬರುತ್ತದೆ. ಶ್ರೀರಂಗಪಟ್ಟಣದಲ್ಲಿ ತೆಲುಗು, ತುರುಕ, ತಿಗುಳ, ಮಲೆಯಾಳ, ಕೊಡಗು ದೇಶಗಳ ಜನರು ಅಸಂಖ್ಯಾತರಾಗಿ ನೆಲೆಸಿದ್ದರು. ಆಯಾ ಸ್ತ್ರೀ ಸಮೂದಾಯದ ಶೋಭಾ ಲಾವಣ್ಯಗಳನ್ನು ಗೋವಿಂದ ವೈದ್ಯನು ಬಣ್ಣಿಸಿದ್ದಾನೆ.

ತೆಲುಗು ನಾರಿಯರು 'ಅಲಘುನಿತಂಬದ, ಚರಣಪಲ್ಲವಗಳು, ಕೆಳೆಗೊಂಡ ವೇಣಿವಲ್ಲರಿಯ, ನೆಲೆಮೊಲೆಗಳ ಬಿಣ್ಣಿನ, ಬೆಡಗಿನ ಚೆಲ್ವೆಯರು.

ತುರುಕನಾರಿಯರು 'ಊರತುಂಬಿ ಮೆರೆವ ಕಂಚುಕ, ಕಾಲಕುಪ್ಪಸ, ವಿರುಪದುಪ್ಪಟದ ನೀರಿಗಳು, ಸುರುಚಿರ ಶೃಂಗಾರದಾಭರಣದ ಚೆಲ್ವೆಯರು.

ತಿಗುಳನಾರಿಯರು 'ಜಘನವಲೆವ ನಿರಿಗಳ, ಹೊಂಗೆಜ್ಜೆಯ, ಬಗೆಸೆಗಂಗಳು, ತೋರಮೊಲೆಯ, ಸೊಗಸುವ ವಾರದುರುಬಿನ, ಸುಂದರಿಯರು.

ಮಲೆಯಾಳದ ಶಶಿಮುಖಿಯರು 'ಮಿಸುನಿಯ ಜೀವಪುತ್ತಳಿಗಳಂದದೆ ರಂಜಿಸುವ ದಿವ್ಯಾಂಗ, ಸುಂದರ ಹೊಸದುಪ್ಪಟದ ಗಾಸೆಯ' ಚೆಲ್ವೆಯರು.

ಕೊಡಗಿತಿಯರು 'ಕಿವಿಯೊಳೊಪ್ಪುವ ತೊಂಬೆಗಡುಕಿನ, ಕಡುಚಲ್ವ ಪೊರವಾರಗಿರಿಯ, ಬಡನಡುವಿನ, ಬಟ್ಟಕುಚದ ಸುಂದರಿಯರು.

ಗೋವಿಂದ ವೈದ್ಯನು ಅಂದಿನ ಕಾಲದಲ್ಲಿ ಸೌಂದರ್ಯವರ್ಧಕ ಸಾಧನಗಳನ್ನು ಬಳಸುತ್ತಿದ್ದರೆಂದು ತಿಳಿಸಿದ್ದಾನೆ. ಆ ಕಾಲದ ಪೀಠೋಪಕರಣಗಳು ಅಂದಿನ ಭೋಗ ಜೀವನದ ದ್ಯೂತಕವಾಗಿದ್ದವು. ಶ್ರೀಮಂತ ವರ್ಗಗಳಲ್ಲಿ ತೂಗುಯ್ಯಾಲೆಗಳೂ, ಮಂಚಗಳೂ, ಹಂಸತೂಲಿಕಾತಲ್ಪಗಳೂ ಸಾಮಾನ್ಯವಾಗಿದ್ದವು. ಶ್ರೀರಂಗಪಟ್ಟಣದ ಉದ್ಯಾನಗಳಲ್ಲಿ ಹಗ್ಗಕಟ್ಟಿ ತೂಗುವ 'ನವಿಲುಯ್ಯಾಲೆ' ಗಳಿದ್ದವೆಂದು ತಿಳಿಸುತ್ತಾನೆ. ಅರಮನೆಗಳಲ್ಲಿ ತೂಗುಯ್ಯಾಲೆಗಳು ಹೇಮರಚಿತವಾಗಿದ್ದವು. ಅವುಗಳಿಗೆ ಚಿನ್ನ ಬೆಳ್ಳಿಯ ಸರಪಳಿಗಳಿದ್ದವು. ಜನಸಾಮಾನ್ಯರ ತೂಗುಯ್ಯಾಲೆಗಳು ಮರದ ಉಯ್ಯಾಲೆಗಳಾಗಿದ್ದು ಅವುಗಳನ್ನು ಕಬ್ಬಿಣದ ಸರಪಳಿಗಳಿಂದಾಗಲಿ, ಹಗ್ಗದಿಂದಾಗಲಿ ನೇತಾಡಿಸುತ್ತಿದ್ದರು.

ಅರಮನೆಗಳಲ್ಲಿ ರಾಜರ ಮಂಚಗಳು ಹಸ್ತಿದಂತ ರಚಿತವಾಗಿ, ವಜ್ರ ಮಾಣಿಕ್ಯಾದಿ ಅಮೂಲ್ಯ ರತ್ನಖಚಿತವಾಗಿ, ನಾನಾ ಪಕ್ಷಿಚಿತ್ರಗಳಿಂದ ಅಲಂಕೃತವಾಗಿದ್ದವು. ಮಂಚಗಳ ಮೇಲಣ ಹಾಸಿಗೆಗಳು ರೇಷ್ಮೆಯಿಂದ ರಚಿತವಾಗಿದ್ದವು. ಅವುಗಳೊಳಗೆ ಸಾಮಾನ್ಯವಾಗಿ ಹಂಸತೂಲಿಕೆಯಂತಹ ಮೃದು ಪದಾರ್ಥವಿದ್ದಿತು ಎಂದು ತಿಳಿಸಿದ್ದಾನೆ.

## ಸ್ತ್ರೀಯರ ಸ್ಥಾನಮಾನ

ಶ್ರೀರಂಗಪಟ್ಟಣದಲ್ಲಿ ಸ್ತ್ರೀಯರಿಗೆ ವಿಶೇಷವಾದ ಗೌರವವಿತ್ತು. ಅವರು ಸುಸಂಸ್ಕೃತರಾಗಿದ್ದರು. ಸಮಾಜದ ಆಗುಹೋಗುಗಳಲ್ಲಿ ಭಾಗಿಗಳಾಗಿರುತ್ತಿದ್ದರು. ಜ್ಯೋತಿಷ್ಯ, ಕಾವ್ಯ, ನಾಟಕಶಾಸ್ತ್ರ, ಸಂಗೀತ ಮೊದಲಾದ ವಿದ್ಯೆಗಳಲ್ಲಿ ಅವರು ನೈಪುಣ್ಯತೆಯನ್ನು ಪಡೆದಿದ್ದರು. ಅಲ್ಲದೆ ಜ್ಞಾನದಾಹ, ಧರ್ಮನಿಷ್ಟೆ, ದಾನಬುದ್ಧಿ, ಶೀಲ ಪಾವಿತ್ರ್ಯ, ದೈವಭಕ್ತಿ ಮುಂತಾದ ಗುಣಗಳಿಗೆ ಅಂದಿನ ಸ್ತ್ರೀಯರು ಪ್ರಸಿದ್ಧರಾಗಿದ್ದರು. ಅವರು ವಿಶೇಷವಾಗಿ ಆಭರಣಗಳನ್ನು ಧರಿಸುತ್ತಿದ್ದರು." ರಾಜೀವ ಮುಖಿಯ ಆಭರಣದ ಕಾಂತಿ ವಿಬಾಜಿಸಿ ಮೆರೆಯಲ್" ಎಂಬುದಾಗಿ ಗೋವಿಂದ ವೈದ್ಯನು ತಿಳಿಸುತ್ತಾನೆ.[28] ರಾಜಪುತ್ರಿಯರು ಸುಗುಣಚರಿತಗಾರ್ತಿಯರು ಎಂದು ಅವನು ಹೇಳುತ್ತಾನೆ. 'ವರವಿದ್ಯಾಕಲಾ ಫ್ರೌಡಿಗೆ ಶಾರದ ಸರಿಮಿಗಿಲೆನಿಸಿ ರಾಜಪರು' ಹೊಳೆವ ನಾಟಕ ಶಾಲೆಯ ಮುದ್ದು ಪಾತ್ರದ ನಳಿನಾಕ್ಷಿಯರು ಗಾನದವರು ಕಲೆ ಸರ್ವಶಾಸ್ತ್ರ ಕೋವಿದೆಯರು ಸೊಬಗಿಂದ ಲಳವಟ್ಟಿಬಗೆಯ ಬಣ್ಣಿಸುವೆ[29] ಎಂದು ಹೇಳಿದ್ದಾನೆ. ನಸುನಗೆಯೆಸವ ಕೌಮುದಿ ಕಣ್ಣಲುಮಿಗೆ ಮಿಸುವ ಕನ್ನೈದಿಲ್ಲಳಾಗೆ ಸೊಸಲ ಕತ್ತುರಿಯ ತಿಲಕದ ಲಾಂಛನದಿಂದ ಶಶಿಮುಖಿಯರು ರಾರಾಜಿಸಿದರು. ರತಿ ದೇವಿಯರ ಸಮೂಹವೂ ಸೌಭಾಗ್ಯದ ಸತಿ ಸೆರೆ ಪಲವುರೂಪಿಸಲಿ ಕ್ಷರೆಯೊಳುನ್ನತದ ಚೆಲ್ವಿನೊಳೊಪ್ಪಿದಳೆನ ಲತಿಶಯಾಂಗನೆ ಯಶಿಸಿದರು. ಜಾಣಿನ ಜಂತುದೇವತೆಗಳೂ ನೂತನ ವಾಣಿಯರುಗಳೆಂತೆನ್ನಲು ಕ್ಷೋಣಿಗೆ ನಾನಾ ಬಗೆಯ ವಿದ್ಯೆಗಳ ಪ್ರವೀಣೆಯ ಶಿಸೆದರೇವೇಳ್ವೆ" ಹೀಗೆ ಗೋವಿಂದವೈದ್ಯನು ಅರಮನೆಯ ರಾಣಿ ಮಹಾರಾಣಿಯರನ್ನೂ ರಾಣಿ ವಾಸದವರನ್ನೂ, ಅರಮನೆಯ ವಿವಿಧ ಭಾಗಗಳಲ್ಲಿದ್ದ ಸ್ತ್ರೀಯರ ವರ್ಣನೆಯನ್ನು ನೀಡಿದ್ದಾನೆ.[30] ಅಂದರೆ ಶ್ರೀರಂಗಪಟ್ಟಣದ ಅರಮನೆಗಳಲ್ಲಿದ್ದ ಸ್ತ್ರೀಯರ ವಿದ್ಯಾಭ್ಯಾಸ ವನ್ನು ಕಲಾಪ್ರೌಢಿಮೆಯನ್ನು ಅವನು ಹೊಗಳಿದ್ದಾನೆ.

ಮಧ್ಯಮ ವರ್ಗದ ಸ್ತ್ರೀಯರು ಸಹ ವಿದ್ಯಾವಂತೆಯಾಗಿ ಲಲಿತ ಕಲೆಗಳಲ್ಲಿ ತುಂಬಾ ಆಸಕ್ತಿಯನ್ನು ತೋರಿಸುತ್ತಿದ್ದರೆಂಬುದನ್ನು ಗೋವಿಂದವೈದ್ಯನು ತಿಳಿಸುತ್ತಾನೆ. ಗ್ರಾಮೀಣ ಪ್ರದೇಶದ ಬಡ ಸ್ತ್ರೀಯರ ಬಗ್ಗೆ ಇವನು ಏನನ್ನೂ ಹೇಳಲಿಲ್ಲವಾದರೂ, ಕಂಠೀರವ ನರಸರಾಜನ ಕಾಲದಲ್ಲಿ ಆರ್ಥಿಕ ವ್ಯವಸ್ಥೆ ಮತ್ತು ಸಾಮಾಜಿಕ ಭದ್ರತೆ ಚೆನ್ನಾಗಿದ್ದುದರಿಂದ ಎರಡು ಹೊತ್ತಿನ ಊಟಕ್ಕೆ ತೊಂದರೆ ಇರಲಿಲ್ಲವೆಂಬುದನ್ನು ನಾವು ಮನಗಾಣಬಹುದು.

ಸಮಾಜದಲ್ಲಿ ಏಕಪತ್ನಿತ್ವ ಮತ್ತು ಬಹುಪತ್ನಿತ್ವ ಪದ್ಧತಿಗಳು ರೂಢಿಯಲ್ಲಿದ್ದವು. ಸಾಮಾನ್ಯವಾಗಿ ರಾಜರು ಮತ್ತು ಶ್ರೀಮಂತ ವರ್ಗಕ್ಕೆ ಸೇರಿದವರು ಅನೇಕ ಮಂದಿ ಸ್ತ್ರೀಯರನ್ನು ವಿವಾಹವಾಗುತ್ತಿದ್ದರು. ಏಕಪತ್ನಿತ್ವಕ್ಕೆ ಆದರ್ಶ ಸಮಾಜದಲ್ಲಿ ಮನ್ನಣೆ ಇದ್ದಿತು. ಮೇಲಿನ ವರ್ಗದ ಜನರು ಕೆಳವರ್ಗದ ಕನ್ನೆಯರನ್ನು ಎರಡನೇ ಅಥವಾ ಮೂರನೆಯ ವಿವಾಹಕ್ಕೆ ಕೈಹಿಡಿಯುತ್ತಿದ್ದರು. ಬ್ರಹ್ಮ, ದೈವ, ಅರ್ಷ, ಪ್ರಜಾಪತ್ಯ, ಗಾಂಧರ್ವ, ಅಸುರ, ಪೈಶಾಚ ಮತ್ತು ರಾಕ್ಷಸ – ಈ ಎಂಟು ಬಗೆಯ ವಿವಾಹಗಳು ಆಚರಣೆಯಲ್ಲಿದ್ದವು. ಸಾಮಾನ್ಯವಾಗಿ ಮೇಲುವರ್ಗಗಳಲ್ಲಿ ವಿಧವಾವಿವಾಹಕ್ಕೆ ಪುರಸ್ಕಾರವಿರಲಿಲ್ಲ. ಆದರೆ ಶೂದ್ರ ಜನಾಂಗಗಳಲ್ಲಿ ಕೂಡುವಳಿ, ಕೂಡಿಕೆ, ಸೀರುಡಿಕೆ ಎಂಬ ಹೆಸರಿನಲ್ಲಿ ವಿಧವೆಯರ ಬಾಳಿಗೆ ಆಧಾರವನ್ನು ಕಲ್ಪಿಸಲಾಗಿತ್ತು. ಕೈಹಿಡಿದ ಹೆಂಡತಿಯನ್ನು ಹೊರ ದೂಡಲು ಗಂಡನಿಗೆ ಅಧಿಕಾರವಿರಲಿಲ್ಲ. ಬಾಲ್ಯವಿವಾಹ ಮತ್ತು ಸಹಗಮನ ಪದ್ಧತಿಗಳು ರೂಢಿ ಯಲ್ಲಿದ್ದು, ಸ್ತ್ರೀಯರಿಗೆ ಸಮಾಜದಲ್ಲಿ ಗೌರವಸ್ಥಾನ ಕಲ್ಪಿಸಲಾಗಿತ್ತು. ಮೇಲುವರ್ಗದವರಲ್ಲಿ ಮಾತ್ರ ಸ್ತ್ರೀ ವಿದ್ಯಾಭ್ಯಾಸಕ್ಕೆ ಮನ್ನಣೆ ಇದ್ದಿತು. ಶ್ರೀರಂಗಪಟ್ಟಣದಲ್ಲಿದ್ದ ರಾಜಮನೆತನದವರು ಹಾಗೂ ಶ್ರೀಮಂತ ವರ್ಗದ ಸ್ತ್ರೀಯರು ಮತ್ತು ದೇವದಾಸಿಯರು ವಿದ್ಯಾವತಿಯರಾಗಿದ್ದುಕೊಂಡು ಕಲಾನ್ವೇಷಣೆಯಲ್ಲಿ ತೊಡಗಿದ್ದರು. ಸಂಗೀತ, ನೃತ್ಯ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ಅವರು ವಿಶೇಷ ಆಸಕ್ತಿಯನ್ನು ತೋರಿಸುತ್ತಿದ್ದರು. ಸಾಹಿತ್ಯ ಕ್ಷೇತ್ರದಲ್ಲಿ ಚಿಕ್ಕದೇವರಾಜ ಒಡೆಯರ ಆಸ್ಥಾನದಲ್ಲಿ ಹೊನ್ನಮ್ಮ ಮತ್ತು ಶೃಂಗಾರಮ್ಮನವರು ತಮ್ಮ ತಮ್ಮ ಪ್ರೌಢಿಮೆಯನ್ನು ತೋರುತ್ತಿದ್ದನ್ನು ಮನಗಾಣಬಹುದು.

ಮೇಲಿನ ಅಧ್ಯಯನದಿಂದ ನವು ಸಮಾಜದಲ್ಲಿ ಅಂದು ಇದ್ದ ಸಾಮಾಜಿಕ ವರ್ಗಗಳನ್ನು ಗುರುತಿಸಬಹುದು. ಅವರ ಪೈಕಿ ಅಗ್ರಹಾರದ ಬ್ರಾಹ್ಮಣರು ಪ್ರಮುಖರಾಗಿದ್ದರು. ಶ್ರೀರಂಗಪಟ್ಟಣ ರಾಜಧಾನಿಯಾಗಿದ್ದುದರಿಂದ ಅನೇಕ ಅಗ್ರಹಾರಗಳು ಇದ್ದುದಾಗಿ ಆಕರಗಳಿಂದ ತಿಳಿದು ಬರುತ್ತದೆ. ಅಗ್ರಹಾರದ ಬ್ರಾಹ್ಮಣರನ್ನು ಎರಡು ವರ್ಗಗಳಾಗಿ ವಿಂಗಡಿಸಬಹುದು.

1) **ಲೌಕಿಕ ಬ್ರಾಹ್ಮಣರು**: ಇವರು ಹೆಚ್ಚಾಗಿ ಅಧಿಕಾರದ ಸ್ಥಾನಮಾನಗಳಲ್ಲಿ ಇದ್ದು ರಾಜರಿಂದ ಸಂಬಳವನ್ನು ಸ್ವೀಕರಿಸಿ ಜೀವನ ನಡೆಸುತ್ತಿದ್ದರು. ಇವರಲ್ಲಿ ಕೆಲವರು ಭೂ ಒಡೆಯರಾಗಿದ್ದರು. ಉದಾ. ಪೂರ್ಣಯ್ಯನವರು ದಿವಾನರಾಗಿದ್ದರು. ಅವರು ಮಾದ್ವ ಸಂಪ್ರದಾಯದ ಬ್ರಾಹ್ಮಣರಾಗಿದ್ದರು.

**2) ಪುರೋಹಿತ ವರ್ಗ**: ಇವರು ಶ್ರೀರಂಗಪಟ್ಟಣದ ಒಳಗೆ ಇದ್ದ ರಂಗನಾಥಸ್ವಾಮಿ ದೇವಾಲಯ ಮತ್ತು ಇತರ ದೇವಾಲಯಗಳಲ್ಲಿ ಅರ್ಚಕರಾಗಿ ಕೆಲಸ ಮಾಡುತ್ತಿದ್ದರು. ಇವರಲ್ಲಿ ಅನೇಕರು ರಾಜ ಪುರೋಹಿತರಾಗಿ ಕೆಲಸ ಮಾಡುತ್ತಿದ್ದರು. ಹೀಗೆ ಅಗ್ರಹಾರದ ಬ್ರಾಹ್ಮಣರು ಲೌಕಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಪ್ರಭಾವ ಪೂರ್ಣವಾದ ಪಾತ್ರವನ್ನು ನಿರ್ವಹಿಸುತ್ತಿದ್ದರು.

ಶ್ರೀರಂಗಪಟ್ಟಣದ ಒಳಗೆ ಆಳುವ ವರ್ಗ ಇದ್ದಿತು. ಇವರ ಮುಖಂಡ ರಾಜನಾಗಿದ್ದನು. ಅಂದರೆ ಮೈಸೂರಿನ ಒಡೆಯರಾಗಿದ್ದರು. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಅರಸುಗಳೆಂಬ ಒಂದು ವಿಶಿಷ್ಟ ಜಾತಿ ಪಂಗಡ ಶ್ರೀರಂಗಪಟ್ಟಣದಲ್ಲಿ ಅಸ್ಥಿತ್ವಕ್ಕೆ ಬಂದಿತು. ಇವರಿಗೆ ಸಂಬಂಧಿಸಿದ ಸಾಮಾಜಿಕ ಕಟ್ಟಳೆಗಳನ್ನು ನೀತಿ ನಿಯಮಗಳನ್ನು ಚಿಕ್ಕದೇವರಾಜ ಒಡೆಯರು ನಿಯಮಿಸಿದ್ದರು. ಆ ಪ್ರಕಾರವಾಗಿ ಇವರು ಜೀವನವನ್ನು ನಡೆಸುತ್ತಿದ್ದರು. ಆಳುವ ವರ್ಗಕ್ಕೆ ಸೇರಿದವರಾದ್ದರಿಂದ ಅರಸು ಜನಾಂಗದವರು ಅರಮನೆಯಲ್ಲಿ ಪ್ರಭಾವಶಾಲಿ ವರ್ಗವಾಗಿದ್ದರು. ಇವರಲ್ಲಿ ವೈಷ್ಣವ ಅರಸುಗಳು ಮತ್ತು ಶೈವ ಸಂಪ್ರದಾಯದ ಅರಸುಗಳು ಇದ್ದರು. ಮತ್ತೆ ಕೆಲವರು ವೀರಶೈವ ಸಂಪ್ರದಾಯವನ್ನು ಅನುಸರಿಸುತ್ತಿದ್ದರು. ಉದಾ. ಕಳಲೆ ಮನೆತನದ ದಳವಾಯಿಗಳು ವೀರಶೈವರಾಗಿದ್ದರು. ಸೈನ್ಯ ಮತ್ತು ಆಡಳಿತದಲ್ಲಿ ಇವರು ಕಾರ್ಯ ನಿರ್ವಹಿಸುತ್ತಿದ್ದರು. ಹೈದರಾಲಿ ಮತ್ತು ಟಿಪ್ಪುವಿನ ಕಾಲದಲ್ಲಿ ಅರಸು ಜನಾಂಗದ ಪ್ರಾಬಲ್ಯ ಸ್ವಲ್ಪ ತಗ್ಗಿತು ಎನ್ನಬಹುದು. ಮುಸ್ಲಿರು ಆಳುವ ವರ್ಗಕ್ಕೆ 18ನೇ ಶತಮಾನದಲ್ಲಿ ಈ ವರ್ಗಕ್ಕೆ ಸೇರಿಕೊಂಡರು. ಉದಾ. ಹೈದರಾಲಿ ಮತ್ತು ಟಿಪ್ಪುಸುಲ್ತಾನ್‌ರನ್ನು ಹೆಸರಿಸಬಹುದು.

ಆಳುವ ವರ್ಗ ಮತ್ತು ಅಧಿಕಾರ ವರ್ಗದ ನಂತರ ಶ್ರೀರಂಗಪಟ್ಟಣದ ಪರಿಸರದಲ್ಲಿ ಕಂಡು ಬರುತ್ತಿದ್ದ ವರ್ಗವೆಂದರೆ ವ್ಯಾಪಾರಿಗಳ ವರ್ಗ. ಇವರಲ್ಲಿ ಮೂರು ಜನಾಂಗದವರಿದ್ದರು.

(1) ಹಿಂದೂಗಳು (2) ಮುಸ್ಲಿಂರು (3) ಐರೋಪ್ಯರು

ಹಿಂದೂಗಳ ಪೈಕಿ ಶೆಟ್ಟಿಗಳು ಮತ್ತು ಬಣಜಿಗರು ಪ್ರಬಲರಾಗಿದ್ದರು. ಮುಸ್ಲಿಂರ ಪೈಕಿ ಪಠಾಣರು ಮತ್ತು ಲಬ್ಬೆಗಳು 18ನೇ ಶತಮಾನದಲ್ಲಿ ಪ್ರಖ್ಯಾತರಾಗಿದ್ದರು. ಪ್ರಧಾನವಾಗಿ ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲಿ ಹಾಗೂ 3ನೇ ಕೃಷ್ಣರಾಜ ಒಡೆಯರ ಕಾಲದಲ್ಲಿ ಐರೋಪ್ಯ

ವರ್ತಕರು ಶ್ರೀರಂಗಪಟ್ಟಣದಲ್ಲಿ ನೆಲೆಸಿದ್ದರು. ಹೀಗಾಗಿ ಇವರು ಸಾಮಾಜಿಕ ವೈವಿಧ್ಯತೆಯನ್ನು ತಂದುಕೊಟ್ಟರು.

ಶ್ರೀರಂಗಪಟ್ಟಣದ ಸಾಮಾಜಿಕ ವ್ಯವಸ್ಥೆಯ ಅಡಿಯಲ್ಲಿ ಇದ್ದ ವರ್ಗವೇ ಊಳಿಗ ವರ್ಗ. ಈ ವರ್ಗದಲ್ಲಿ ಗೇಣಿದಾರರು, ಭೂರಹಿತ ಕಾರ್ಮಿಕರು, ಜೀತದಾಳುಗಳು ಮತ್ತು ಅಸ್ಪೃಶ್ಯರನ್ನು ಹೆಸರಿಸ ಬಹುದು. ಇವರು ಮೇಲುವರ್ಗದ ಸಮಾಜದ ಸದಸ್ಯರ ಸೇವೆಯನ್ನು ಮಾಡಿಕೊಂಡು ಬದುಕುತ್ತಿದ್ದರು. ಅರಮನೆಯಿಂದ ಹಿಡಿದು ಶ್ರೀಮಂತ ವರ್ಗದ ಮನೆಯವರೆಗೆ ಎಲ್ಲಾ ಕಡೆ ಇವರು ಊಳಿಗವನ್ನು ಮಾಡುತ್ತಿದ್ದರು. ಇವರ ಸಾಮಾಜಿಕ ಸ್ಥಾನಮಾನಗಳು ಅತ್ಯಂತ ಕೆಳಮಟ್ಟದ್ದಾಗಿದ್ದಿತೆಂದು ಹೇಳಬಹುದು. ಒಟ್ಟಿನಲ್ಲಿ ಶ್ರೀರಂಗಪಟ್ಟಣದ ಪರಿಸರದಲ್ಲಿ ಪ್ರಧಾನವಾಗಿ ವರ್ಣವ್ಯವಸ್ಥೆಯ ಮೂಲಭೂತವಾದ ಅಂಶಗಳು ಜಾರಿಯಲ್ಲಿ ಇದ್ದಿತು. ಆಳುವ ವರ್ಗ ಸಾಮಾಜಿಕ ನಿಯಮಗಳನ್ನು ಕಟ್ಟಳೆಗಳನ್ನು ಬದಲಾಯಿಸಲು ತೀವ್ರತರವಾದ ಪ್ರಯತ್ನಗಳನ್ನು ಮಾಡಲಿಲ್ಲ. ಯಥಾಸ್ಥಿತಿಯನ್ನು ಕಾಪಾಡಿಕೊಂಡು ಹೋಗುವುದೇ ಅಂದಿನ ಆಳುವ ವರ್ಗದ ಸಾಮಾಜಿಕ ಧೋರಣೆಯಾಗಿತ್ತು. ಸುಮಾರು 1800ರಲ್ಲಿ ಶ್ರೀರಂಗಪಟ್ಟಣಕ್ಕೆ ಬಂದಿದ್ದ ಬುಕ್ಯಾನನ್ ಎಂಬ ಬ್ರಿಟಿಷ್ ಪ್ರವಾಸಿಗ ನೀಡಿರುವ ಸಾಮಾಜಿಕ ಚಿತ್ರವು ಇದನ್ನು ಬೆಂಬಲಿಸುತ್ತದೆ. ಅವನ ಪ್ರಕಾರ ಶ್ರೀರಂಗಪಟ್ಟಣದ ಪರಿಸರದಲ್ಲಿ ಎಡಗೈ ಮತ್ತು ಬಲಗೈ ಎಂಬ ಎರಡು ರೀತಿಯ ಸಾಮಾಜಿಕ ವಿಭಜನೆ ಇದ್ದಿತ್ತೆಂದು ಬರೆಯುತ್ತಾನೆ.[31] ಸಮಾಜವನ್ನು ನಿರ್ದೇಶಿಸುವ ಮತ್ತು ನಿಯಂತ್ರಿಸುವ ಶಕ್ತಿಗಳಲ್ಲಿ ಧರ್ಮ ಪ್ರಧಾನವಾದುದು. ಆದುದರಿಂದ ಶ್ರೀರಂಗಪಟ್ಟಣ ಧಾರ್ಮಿಕ ಕೇಂದ್ರವಾಗಿ ಹೇಗೆ ಬೆಳೆದು ಬಂದಿತು ಎಂಬುದನ್ನು ಮುಂದಿನ ಅಧ್ಯಾಯದಲ್ಲಿ ಪರಿಶೀಲಿಸಬಹುದು.

## ಅಡಿಟಿಪ್ಪಣಿಗಳು

1) ಎ.ಕ.6 (ಎನ್.ಎಸ್) ಶ್ರೀ.ಪ.23, 1664 ಎ.ಡಿ
2) ಅದೇ, ಶ್ರೀ ಪ.24, 1686 ಎ.ಡಿ
3) ಅದೇ, ಶ್ರೀ ಪ.107, 108, 78–1012 ಎ.ಡಿ
4) ಅದೇ, ಶ್ರೀ ಪ.28, 18ನೇ ಶತಮಾನ
5) ಅದೇ, ಶ್ರೀ ಪ.36
6) ಗೋವಿಂದವೈದ್ಯ – ಕಂಠೀರವ ನರಸರಾಜ ವಿಜಯ, ಸಂಪಾದಕ, ಡಾ.ಆರ್. ಶಾಮಶಾಸ್ತ್ರಿ ಕ.ಅ.ಸಂ.ಮೈಸೂರು 1971, ಸಂಧಿ 5, 5–60; ಸಂಧಿ 6, 42–48, 56, 176–177, ಸಂಧಿ 8, 19, 33–36, 55–69; ಸಂಧಿ 21.
7) ಅದೇ, ಸಂಧಿ 5, 5–60, ಸಂಧಿ 6, 42–48, 56, 176–177; ಸಂಧಿ 8, 19, 33–36, 55–69, ಸಂಧಿ 21.
8) ಚಿಕ್ಕದೇವರಾಜ ವಂಶಾವಳಿ ಪುಟ 45–48
9) ಕಂ.ನ.ವಿ. ಸಂಧಿ 5 ಪದ್ಯ 50
10) ಅದೇ; ಸಂಧಿ 5, ಪ.51
11) ಅದೇ; ಸಂಧಿ 5, ಪ.52–55
12) ಅದೇ, ಸಂಧಿ 5, ಪ.56
13) ಅದೇ, ಸಂಧಿ 5, ಪ.57
14) ಅದೇ, ಸಂಧಿ 5, ಪ.52
15) ಅದೇ, ಸಂಧಿ 5, ಪ.53
16) ಅದೇ, ಸಂಧಿ 5, ಪ.54–56
17) ಅದೇ, ಸಂಧಿ 5, ಪ.61
18) ಅದೇ, ಸಂಧಿ 5, ಪ.73
19) ಅದೇ, ಸಂಧಿ 5, ಪ.75
20) ಅದೇ, ಸಂಧಿ 5, ಪ.88
21) ಅದೇ, ಸಂಧಿ 6, ಪ.91–198 ಈ ಸಂಧಿಯಲ್ಲಿ ಸೂಳೆಗೇರಿಯ ವರ್ಣನೆ ತುಂಬ ವಿಸ್ತಾರವಾಗಿದ್ದು, ಉತ್ತಾನವೆನಿಸಬಹುದಾದರೂ, ಶೃಂಗಾರದ ವಾಸ್ತವ ಚಿತ್ರದಿಂದ ಕೂಡಿದೆ.

22) ಅದೇ, ಸಂಧಿ 7, ಪ.10–18

23) ಅದೇ, ಸಂಧಿ 7, ಪ.23–29

24) ಅದೇ, ಸಂಧಿ 7, ಪ.30

25) ಅದೇ, ಸಂಧಿ 7, ಪ.31

26) ಅದೇ, ಸಂಧಿ 7, ಪ.34

27) ಅದೇ, ಸಂಧಿ 7, ಪ.36

28) ಅದೇ, ಸಂಧಿ 7, ಪ.44

29) ಅದೇ, ಸಂಧಿ 7, ಪ.4–

30) ಅದೇ, ಸಂಧಿ 7, ಪ.13–15

31) Buchanan H.F. A Journey from Madras through the contries of Mysore, Canara and Malabar Vol.1, p.77

# ಅಧ್ಯಾಯ-4
# ಧಾರ್ಮಿಕ ಕೇಂದ್ರವಾಗಿ ಶ್ರೀರಂಗಪಟ್ಟಣ

ಶ್ರೀರಂಗಪಟ್ಟಣವು ಧಾರ್ಮಿಕ ಕೇಂದ್ರವು ಆಗಿತ್ತು. ಕಾವೇರಿ ನದಿಯ ಸಂಗಮದಿಂದ ಇದು ಒಂದು ಪಾವಿತ್ರತೆಯನ್ನು ಪಡೆದುಕೊಂಡಿದ್ದಿತು. ಆದುದರಿಂದ ಹೊಯ್ಸಳರ ಕಾಲದಿಂದಲೇ ಈ ಪ್ರದೇಶಕ್ಕೆ ಧಾರ್ಮಿಕ ಪ್ರಸಿದ್ಧಿ ಆರಂಭವಾಯಿತು. 12ನೇಯ ಶತಮಾನದಲ್ಲಿ ಹೊಯ್ಸಳ ರಾಜ್ಯದ ಭಾಗವಾಗಿದ್ದ ಶ್ರೀರಂಗಪಟ್ಟಣ ಮತ್ತು ಮೇಲುಕೋಟೆ ಶ್ರೀ ವೈಷ್ಣವರ ಪ್ರಮುಖ ನೆಲೆಗಳಾಗಿ ಕಾಣಿಸಿಕೊಂಡವು. ಕ್ರಿ.ಶ. 1336ರಿಂದ ಆಳಿದ ವಿಜಯನಗರದ ಅರಸರ ಕಾಲದಲ್ಲಿ ಶ್ರೀರಂಗಪಟ್ಟಣವು ಶ್ರೀ ವೈಷ್ಣವರ ನೆಲೆಯಾಗಿ ಮುಂದುವರಿಯಿತು. ಅರವೀಡು ವಂಶದ ದೊರೆಗಳ ಕಾಲದಲ್ಲಿ ಶ್ರೀರಂಗಪಟ್ಟಣ ವಿಜಯನಗರ ಚಕ್ರವರ್ತಿಯ ಪ್ರತಿನಿಧಿಯ ಕೇಂದ್ರವಾಗಿತ್ತು. ಆದುದರಿಂದ ಆಳುವ ವರ್ಗದ ಆಶ್ರಯದಿಂದ ಶ್ರೀರಂಗಪಟ್ಟಣದಲ್ಲಿ ವಾಸಿಸುತ್ತಿದ್ದ ಶ್ರೀ ವೈಷ್ಣವರಿಗೆ ಅನುಕೂಲವಾಯಿತು. ಕ್ರಿ.ಶ.1610 ರಲ್ಲಿ ಶ್ರೀರಂಗಪಟ್ಟಣ ರಾಜ ಒಡೆಯರ ವಶವಾಯಿತು. ಅಲ್ಲಿಂದೀಚೆಗೆ ಶ್ರೀರಂಗಪಟ್ಟಣ ಧಾರ್ಮಿಕವಾಗಿ ಒಡೆಯರ ಪೋಷಣೆಯಲ್ಲಿ ಪ್ರಗತಿಯನ್ನು ಸಾಧಿಸಿತು.

ವಿಜಯನಗರದ ಪೂರ್ವ ಕಾಲದ ಒಂದು ಶಾಸನ ಮತ್ತು ವಿಜಯನಗರ ಕಾಲದ ಎರಡು ಶಾಸನಗಳು ಶ್ರೀರಂಗಪಟ್ಟಣದಲ್ಲಿ ದೊರೆಯುತ್ತವೆ. ಅವುಗಳಲ್ಲಿ ಅಡಕವಾಗಿರುವ ವಿಷಯಗಳನ್ನು ಇಲ್ಲಿ ಪ್ರತಿಪಾದಿಸಬಹುದು.

ಹೊಯ್ಸಳರ ಕಾಲದಲ್ಲಿ ಶ್ರೀರಂಗಪಟ್ಟಣವು ಶ್ರೀ ವೈಷ್ಣವರ ನೆಲೆಯಾಗಿತ್ತು ಎಂಬುದಕ್ಕೆ ಇಲ್ಲಿ ದೊರೆತಿರುವ ಒಂದು ಶಾಸನ ಗಮನಾರ್ಹವಾದುದು. ಈ ಶಾಸನ ತಮಿಳು ಮತ್ತು ಸಂಸ್ಕೃತ ಭಾಷೆಗಳಲ್ಲಿ ಇದೆ. ವಿಷ್ಣುವನ್ನು ಸ್ತುತಿಸುವ ಸಂಸ್ಕೃತದ ಎರಡು ಪದ್ಯಗಳು ಈ ಶಾಸನದಲ್ಲಿ ಬರುತ್ತದೆ. ಶಾಸನದ ಕಾಲ ಕ್ರಿ.ಶ. 1210 ಆಗ ಹೊಯ್ಸಳ ವೀರಬಲ್ಲಾಳ ಆಳುತ್ತಿದ್ದನು. ಶ್ರೀರಂಗಪಟ್ಟಣವನ್ನು 'ತಿರುವೆಂಗಡನಾರಾಯಣ ಚತುರ್ವೇದಿ ಮಂಗಳಂ' ಎಂದು ಕರೆಯಲಾಗಿದೆ. ಒಂದು ಗ್ರಾಮವನ್ನು 65 ವೃತ್ತಿಗಳಾಗಿ ವಿಭಾಗಿಸಿ 88 ಶ್ರೀ ವೈಷ್ಣವರಿಗೆ ಏರಂತರುಂ ಪೆರುಮಾನ್ ಎಂಬುವನು ದಾನ ಮಾಡಿದನು. ಇದರಿಂದ 13ನೇ ಶತಮಾನದ ಹೊತ್ತಿಗೆ ಶ್ರೀರಂಗಪಟ್ಟಣವು ಶ್ರೀ ವೈಷ್ಣವರ ನೆಲೆಯಾಗಿದ್ದುದು ಗೊತ್ತಾಗುತ್ತದೆ.[1]

ಇನ್ನೊಂದು ಶಾಸನ ಕ್ರಿ.ಶ.1431ಕ್ಕೆ ಸೇರಿದ್ದಾಗಿದೆ. ಆಗ ವಿಜಯನಗರದ ದೇವರಾಯನು ಆಡಳಿತ ನಡೆಸುತ್ತಿದ್ದನು. ಈ ವೇಳೆಗೆ ಇಲ್ಲಿ ಶ್ರೀ ವೈಷ್ಣವರು ನೆಲೆಸಿದ್ದರು. ಅವರ ಆರಾಧ್ಯದೈವ ಶ್ರೀರಂಗನಾಥಸ್ವಾಮಿ ಶ್ರೀರಂಗಪಟ್ಟಣವನ್ನು 'ಶ್ರೀರಂಗಪುರ'ವೆಂದು ಕರೆಯುತ್ತಿದ್ದರು. ಈ ಪಂಥದ ಪ್ರಮುಖರನ್ನು ಶ್ರೀ ವೈಷ್ಣವ ಮಹಾಜನಗಳೆಂದು ಶಾಸನದಲ್ಲಿ ಹೆಸರಿಸಲಾಗಿದೆ. ರಂಗನಾಥ ದೇವರಿಗೆ ಶ್ರೀರಂಗಪಟ್ಟಣದಲ್ಲಿ ವಸಂತೋತ್ಸವ ಎಂಬ ವಿಶಿಷ್ಟವಾದ ಸೇವೆಯನ್ನು ಸಲ್ಲಿಸುತ್ತಿದ್ದರು. ಅಂತಹ ಸೇವೆಯನ್ನು ಸಲ್ಲಿಸುವುದಕ್ಕಾಗಿ ಶ್ರೀ ವೈಷ್ಣವರು 30 ಹೊನ್ನುಗಳನ್ನು ಕೊಟ್ಟರೆಂದು ಈ ಶಾಸನ ತಿಳಿಸುತ್ತದೆ. ಇದರಿಂದ ಶ್ರೀ ವೈಷ್ಣವರ ನೆಲೆಯಾಗಿ ಶ್ರೀರಂಗಪಟ್ಟಣ ಕ್ರಿ.ಶ. 1431ರಲ್ಲಿ ಇದ್ದಂತಹ ಸ್ಥಿತಿಯನ್ನು ಊಹಿಸಿಕೊಳ್ಳಬಹುದು. ಶ್ರೀ ವೈಷ್ಣವರು ರಂಗನಾಥ ದೇವರಿಗೆ ವಸಂತೋತ್ಸವವಲ್ಲದೆ "ತಿರುನಾಳಬಿಜಯಂ" ಎಂಬ ಆರಾಧನೆಯನ್ನು ಮಾಡುತ್ತಿದ್ದರು.[2]

ಮತ್ತೊಂದು ಶಾಸನ ಕ್ರಿ.ಶ. 1598ಕ್ಕೆ ಸೇರಿದ್ದಾಗಿದೆ. ಆಗ ಅರವೀಡು ವಂಶದ ವೆಂಕಟಪತಿ ರಾಯನು ಆಳುತ್ತಿದ್ದನು. ಶ್ರೀರಂಗಪಟ್ಟಣ ಅವನ ಆಡಳಿತಕ್ಕೆ ಒಳಪಟ್ಟಿದ್ದಿತು. ಈ ವಂಶದ ಅರಸರು ಸಹ ಶ್ರೀರಂಗಪಟ್ಟಣದ ಶ್ರೀ ವೈಷ್ಣವರಿಗೆ ಆಶ್ರಯ ಮತ್ತು ಪೋಷಣೆಯನ್ನು ನೀಡಿದ್ದರು ಎಂಬುದಕ್ಕೆ ಈ ಶಾಸನದಲ್ಲಿ ಆಧಾರ ದೊರೆಯುತ್ತದೆ. ಈ ಶಾಸನದ ಪ್ರಕಾರ 20 ಜನ ಶ್ರೀ ವೈಷ್ಣವರಿಗೂ ಮತ್ತು 30 ಜನ ವೈದಿಕರಿಗೂ ಅವರ ಬೋಜನಕ್ಕಾಗಿ 'ರಾಮಾನುಜಕೂಟ'ವೆಂಬ ಬೋಜನ ಶಾಲೆ ಯನ್ನು ಸ್ಥಾಪಿಸಿದ ವಿವರ ಬಂದಿದೆ. ಈ ವೇಳೆಗೆ ಮೈಸೂರಿನ ಅರಸರು ಅರವೀಡು ವಂಶದ ವಿಜಯನಗರದ ಅರಸರಿಗೆ ಸಾಮಂತ ಪ್ರಭುಗಳಾಗಿ ಆಳುತ್ತಿದ್ದರು. ರಾಮಾನುಜ ಕೂಟದ ವ್ಯವಸ್ಥೆಗೆ ಸತ್ತಿಗನಹಳ ಮತ್ತು ಮಜ್ಜಿಗೆಪುರ ಎಂಬ ಹಳ್ಳಿಗಳನ್ನು ದಾನವಾಗಿ ಕೊಡಲಾಯಿತು. ವೈಷ್ಣವ ಮಹಾಜನರು ಮಜ್ಜಿಗೆಪುರವನ್ನು ಈ ಕಾರ್ಯಕ್ಕಾಗಿ ದಾನ ನೀಡಿದವರಿಗೆ ಮಾರಿದರೆಂದು ಶಾಸನ ತಿಳಿಸುತ್ತದೆ.[3]

ಒಡೆಯರ ಇತಿಹಾಸದಲ್ಲಿ ಚಿಕ್ಕದೇವರಾಜ ಒಡೆಯರು ಅತ್ಯಂತ ಪ್ರಮುಖರು. ಅವರ ಕಾಲದಲ್ಲಿ ಶ್ರೀರಂಗಪಟ್ಟಣ ಮತ್ತು ರಾಜ್ಯದ ಇತರ ಅನೇಕ ಕಡೆ ಶ್ರೀ ವೈಷ್ಣವ ಧರ್ಮ ಹೆಚ್ಚಿನ ಪ್ರೋತ್ಸಾಹವನ್ನು ಪಡೆದುಕೊಂಡಿತು. ಚಿಕ್ಕದೇವರಾಜ ಒಡೆಯರು ಸ್ವತಃ ಶ್ರೀ ವೈಷ್ಣವರಾಗಿದ್ದರು. ಅವರು ಶ್ರೀ ವೈಷ್ಣವ ಧರ್ಮದ ಪ್ರಗತಿಗಾಗಿ ನಡೆಸಿದ ಕಾರ್ಯಗಳನ್ನು ಇಲ್ಲಿ ಪರಿಶೀಲಿಸಬಹುದು.

ಶ್ರೀ ವೈಷ್ಣವ ದೇವಾಲಯಗಳನ್ನು ದುರಸ್ತಿ ಮಾಡುವುದು; ಹೊಸ ಹೊಸದಾಗಿ ದತ್ತಿ ಬಿಡುವುದು; ಕೊಳ ತೋಡಿಸುವುದು; ಮತ್ತು ದೇವಾಲಯದ ಆವರಣವನ್ನು ಚೊಕ್ಕಟವಾಗಿಡುವುದು; ಇವುಗಳಲ್ಲಿ ಚಿಕ್ಕದೇವರಾಜ ಒಡೆಯರು ಹೆಚ್ಚು ಆಸಕ್ತಿ ವಹಿಸಿದ್ದರು. 1685ರ ಒಂದು ಪವಿತ್ರ ಸಂದರ್ಭದಲ್ಲಿ ಚಿಕ್ಕದೇವರಾಜ ಒಡೆಯರು ಮಳವಳ್ಳಿ ಲಕ್ಷ್ಮೀನಾರಾಯಣ ದೇವಾಲಯಕ್ಕೆ ಭೇಟಿ ಕೊಟ್ಟು ದೇವಾಲಯದ ಮುಂಭಾಗದಲ್ಲಿ ಒಂದು ಕೊಳವನ್ನು ತೋಡಿಸಿದರು.

ಬಾಲ್ಯದಲ್ಲಿ ಚಿಕ್ಕದೇವರಾಜ ಒಡೆಯರು ತಿರುಮಲ ಅಯ್ಯಂಗಾರ್ ಮೊದಲಾದ ಶ್ರೀ ವೈಷ್ಣವ ಗುರುಗಳ ಬಳಿ ಅಧ್ಯಯನ ನಡೆಸಿ ಶುದ್ಧ ವೈಷ್ಣವರಾಗಿ ಪರಿವರ್ತನೆಗೊಂಡರು. ಶ್ರೀ ವೈಷ್ಣವ ಮತ ದಲ್ಲಿ ಅವರಿಗೆ ಅತ್ಯಂತ ಆಸಕ್ತಿಯಿದ್ದಿತು. ಆ ಪಂಥಕ್ಕೆ ಅವರು ಮಹತ್ವದ ಪ್ರೋತ್ಸಾಹ ನೀಡಿದರು. ಈ ಕಾರಣದಿಂದಲೇ "ಶ್ರೀ ವೈಷ್ಣವ ಮತ ಪ್ರತಿಷ್ಠಾರ್ಥ" ಮತ್ತು "ಸದಾ ಶ್ರೀ ವೈಷ್ಣವ ಪ್ರಿಯ" ಎಂದು ಅವರನ್ನು ಕರೆಯಲಾಗಿದೆ.

ವಿದ್ಯೆಯಲ್ಲಿ ಬೃಹಸ್ಪತಿ ಎನಿಸಿಕೊಂಡ ಶ್ರೀ ವೈಷ್ಣವ ಬ್ರಾಹ್ಮಣನಾದ ತಿರುಮಲರಾಯನನ್ನು ಚಿಕ್ಕದೇವರಾಜ ಒಡೆಯರು ಸಚಿವನನ್ನಾಗಿ ನೇಮಿಸಿಕೊಂಡರು. ಅಲ್ಲದೆ ಅವರು ಬ್ರಾಹ್ಮಣರಿಗೆ ಅನ್ನ ದಾನವನ್ನು ಮಾಡುವುದರಲ್ಲೂ ಆಸಕ್ತಿ ವಹಿಸಿದ್ದರು. 1676ರಲ್ಲಿ ಹರದನಹಳ್ಳಿಯಲ್ಲಿ ಒಂದು ಛತ್ರ ವನ್ನು ತೆರೆಯಲು ಆಜ್ಞಾಪಿಸಿ ಅದಕ್ಕಾಗಿ ಬೊಮ್ಮನಹಳ್ಳಿ ಎಂಬ ಊರನ್ನೇ ದತ್ತಿಯಾಗಿ ಬಿಟ್ಟು ಕೊಟ್ಟರು. ತಮ್ಮ ಗುರುಗಳಾದ ತಿರುಮಲ ಅಯ್ಯಂಗಾರರ ಗೌರವಾರ್ಥ ರಾಜರು ಛತ್ರವನ್ನು ಕಟ್ಟಿಸಿದರಲ್ಲದೆ ಶ್ರೀರಂಗಪಟ್ಟಣದ ಈಶಾನ್ಯ ದಿಕ್ಕಿನಲ್ಲಿ ವೆಂಕಟೇಶ್ವರ ದೇವಾಲಯವನ್ನು ಕಟ್ಟಿಸಿದರು. ವೈಷ್ಣವ ಹಿತರಕ್ಷಣೆ ಮತ್ತು ಅಧ್ಯಯನವನ್ನು ಪ್ರೋತ್ಸಾಹಿಸುವುದರಲ್ಲಿ ಒಡೆಯರು ತೀವ್ರಾಸಕ್ತಿ ವಹಿಸಿದ್ದರು. 1678ರಲ್ಲಿ ಶ್ರೀ ವೈಷ್ಣವ ಪಂಡಿತನಾಗಿದ್ದ ಅಳಸಿಂಗಾರ್ ಅಯ್ಯಂಗಾರ್‌ರವರಿಗೆ ಎರಡು ಗ್ರಾಮಗಳನ್ನು ಉಂಬಳಿಯಾಗಿ ಬಿಟ್ಟುಕೊಟ್ಟರು.

ತಿರುನಾರಾಯಣಪುರಿ ಅಥವಾ ಯಾದವಗಿರಿಯೆಂದು ಕರೆಯಲ್ಪಡುತ್ತಿದ್ದ ಸ್ಥಳವು ಶ್ರೀ ವೈಷ್ಣವರಿಗೆ ಒಂದು ಪ್ರಮುಖ ಕೇಂದ್ರವಾಗಿತ್ತು. ಅಲ್ಲಿ ಸಿಂಗಾರ್ ಅಯ್ಯಂಗಾರ್, ತಿರುಮಲ ಅಯ್ಯಂಗಾರ್ ಎಂಬ ಇಬ್ಬರು ಮೇಧಾವಿಗಳಾದ ಪಂಡಿತರು ಇದ್ದರು. ಅವರಿಗೆ ವೇದಜ್ಞಾನವು ಚೆನ್ನಾಗಿದ್ದಿತಲ್ಲದೆ ಮಹಾಭಾರತ ಮತ್ತು ಭಗವದ್ಗೀತೆಗಳನ್ನು ಪಠಣ ಮಾಡುವುದರಲ್ಲಿ ನಿಷ್ಣಾತ

ರಾಗಿದ್ದರು. 1678ರಲ್ಲಿ ಚಿಕ್ಕದೇವರಾಜ ಒಡೆಯರು ಯಾದವರಿಗೆ ಭೇಟಿಕೊಟ್ಟು ಈ ಇಬ್ಬರು ಪಂಡಿತರ ಬಗ್ಗೆ ತುಂಬಾ ಸುಪ್ರೀತರಾದರು. ಅವರ ಅಧ್ಯಯನ ಕಾರ್ಯಕ್ಕೆ ಪ್ರೋತ್ಸಾಹ ನೀಡಲು ಬೀರವಳ್ಳಿ ಗ್ರಾಮವನ್ನು ಉಂಬಳಿಯಾಗಿ ಕೊಟ್ಟರು. ಚಿಕ್ಕದೇವರಾಜ ಒಡೆಯರು ಒಬ್ಬ ಅತ್ಯಂತ ಧಾರ್ಮಿಕ ಭಾವನೆಯುಳ್ಳ ರಾಜರಾಗಿದ್ದು, ಧರ್ಮಶಾಸ್ತ್ರದ ಕಟ್ಟಾ ಅನುವರ್ತಿಗಳಾಗಿದ್ದರು. ಎಲ್ಲಾ ಪವಿತ್ರ ಸಂದರ್ಭಗಳಲ್ಲೂ ಧಾರ್ಮಿಕ ವಿಧಿಗಳನ್ನು ತಪ್ಪದೇ ಆಚರಿಸುತ್ತಿದ್ದರು. ಅಂತಹ ಸಂದರ್ಭ ಗಳಲ್ಲಿ ಸಾದಾರಣವಾಗಿ ಅವರು ಯಾವುದಾದರೊಂದು ಧರ್ಮಕಾರ್ಯವನ್ನು ಪ್ರಜಾಹಿತಕ್ಕಾಗಿ ಮಾಡುತ್ತಿದ್ದರು.

ಶ್ರೀ ಕೃಷ್ಣ ಜಯಂತಿಯ ಸಂದರ್ಭದಲ್ಲಿ ಮಾಣಿಕಪುರದ ಜಮೀನನ್ನು ಗೋಪಾಲಸ್ವಾಮಿ ದೇವರ ಪೂಜಾರ್ಥ ಉಂಬಳಿ ಕೊಟ್ಟರು. ತಮ್ಮ ಸೇವಕರು ಅಂತಹ ಧರ್ಮಕಾರ್ಯವನ್ನು ಮಾಡುವಂತೆ ಕೆಲಸವನ್ನು ಮಾಡಲು ರಾಜರು ಪ್ರೋತ್ಸಾಹಿಸುತ್ತಿದ್ದರು. ಶ್ರೀ ರಾಮನವಮಿಯ ಸಂದರ್ಭದಲ್ಲಿ ರಾಜರ ಒಬ್ಬ ಸೇವಕನು ಭೂಮಿಯನ್ನು ಕೊಂಡು ಅದನ್ನು ಕೋದಂಡರಾಮ ದೇವಾಲಯಕ್ಕೆ ಉಂಬಳಿ ಕೊಟ್ಟನು. ಇದೇ ಸಂದರ್ಭದಲ್ಲಿ ರಾಜರು ಅದೇ ದೇವರಿಗೆ ತಮ್ಮ ವೈಯಕ್ತಿಕ ಕೊಡುಗೆಯನ್ನು ಕೊಟ್ಟರು. ಈ ಕೊಡುಗೆಯ ಪತ್ರವನ್ನು ತಾವೇ ಬರೆದು ಸಹಿ ಹಾಕಿರುವರೆಂದು ದಾಖಲೆ ಸ್ಪಷ್ಟಪಡಿಸುತ್ತದೆ. ಇದು ಅವರು ಅಂತಹ ಧರ್ಮಕಾರ್ಯಗಳಲ್ಲಿ ಎಷ್ಟು ಉತ್ಸಾಹಿಗಳಾಗಿದ್ದರೆಂಬುದನ್ನು ರುಜುವಾತು ಪಡಿಸುತ್ತದೆ.

1675ರಲ್ಲಿ ಇವರು ಜಡಿಗನ ದುರ್ಗವನ್ನು ಗೆದ್ದು ಅದಕ್ಕೆ 'ಚಿಕ್ಕದೇವರಾಯ ದುರ್ಗ'ವೆಂದು ಹೊಸದಾಗಿ ನಾಮಕರಣ ಮಾಡಿದರು. ಅದೇ ಸ್ಥಳದಲ್ಲಿ ಯವನರ ಧಾಳಿಯ ಸಂದರ್ಭದಲ್ಲಿ ಕಳೆದು ಹೋಗಿದ್ದ "ವರಾಹ" ಪ್ರತಿಮೆಯನ್ನು ಮತ್ತೆ ಪಡೆದರು. ಅದನ್ನು ಶ್ರೀರಂಗಪಟ್ಟಣಕ್ಕೆ ತಂದು ದೇವಾಲಯವೊಂದರಲ್ಲಿ ಪ್ರತಿಷ್ಠಾಪಿಸಿ ಅತ್ಯಂತ ಭಕ್ತಿಯಿಂದ ಆರಾಧಿಸುತ್ತಿದ್ದರು.

ಚಿಕ್ಕದೇವರಾಜ ಒಡೆಯರು ಅನೇಕ ಸ್ಥಳಗಳಲ್ಲಿ ಅನೇಕ ವೈಷ್ಣವ ದೇವಾಲಯಗಳನ್ನು ಕಟ್ಟಿಸಿದರು. ಇವುಗಳಲ್ಲಿ ಬೆಂಗಳೂರಿನ ಟಿಪ್ಪುಸುಲ್ತಾನನ ಅರಮನೆಯ ಬಳಿಯಿರುವ ವೆಂಕಟೇಶ್ವರ ದೇವಾಲಯವು ಹೆಚ್ಚು ಪ್ರಮುಖವಾದುದು. ಅಲ್ಲದೆ ಇದೇ ದೇವಸ್ಥಾನವನ್ನು ಇವರ ಮಕ್ಕಳಾದ ಕಂಠೀರವ ನರಸಿಂಹರಾಜ ಒಡೆಯರು ಅಭಿವೃದ್ಧಿಗೊಳಿಸಿದರು.

ಚಿಕ್ಕದೇವರಾಜ ಒಡೆಯರ ನಾಣ್ಯಗಳು ಶ್ರೀ ವೈಷ್ಣವ ಪಂಥದೆಡೆಗೆ ಅವರಿಗಿದ್ದ ಖಚಿತವಾದ ಬಲವನ್ನು ಸೂಚಿಸುತ್ತದೆ. ನಾಣ್ಯಗಳ ಮುಖದ ಮೇಲೆ 'ಮುರಳೀಧರ' ಮತ್ತು 'ಕಾಳಿಂಗಮರ್ದನ' ಪ್ರತಿಮೆಗಳನ್ನು ಮುದ್ರಿಸಲಾಗಿದೆ.

ತಮ್ಮ ಕುಶಲ ಆರ್ಥಿಕ ನೀತಿಯಿಂದ ಚಿಕ್ಕದೇವರಾಜ ಒಡೆಯರು ದೊಡ್ಡ ಐಶ್ವರ್ಯವನ್ನು ಕೂಡಿಸಿದ್ದರು. ಈ ಕಾರಣದಿಂದ ಇವರಿಗೆ 'ನವಕೋಟಿ ನಾರಾಯಣ' ಎಂಬ ಬಿರುದು ಬಂದಿತ್ತು. ಈ ಬಿರುದೂ ಸಹ ಅವರು ಶ್ರೀ ವೈಷ್ಣವ ಪಂಥದ ಪರಮ ಅನುಯಾಯಿಗಳಾಗಿದ್ದರು ಎಂಬುದನ್ನು ದೃಢಪಡಿಸುತ್ತದೆ.[5]

ಸಾಹಿತ್ಯದ ಅಭಿವೃದ್ಧಿಗೆ ರಾಜರು ಬಹಳಷ್ಟು ಪ್ರೋತ್ಸಾಹ ಕೊಟ್ಟರು. ಚಿಕ್ಕದೇವರಾಜರ ಆಸ್ಥಾನದಲ್ಲಿ ಅನೇಕ ಶ್ರೀ ವೈಷ್ಣವ ಕವಿಗಳಿದ್ದರು ಮತ್ತು ಅವರಿಗೆ ರಾಜಾಶ್ರಯವು ಇದ್ದಿತು. ತಿರುಮಲರಾಯ, ತಿಮ್ಮಕವಿ, ಚಿಕ್ಕುಪಾಧ್ಯಾಯ, ಕವಯಿತ್ರಿಯಾದ ಶೃಂಗಾರಮ್ಮ ಇವರುಗಳು ಪ್ರಮುಖರಾಗಿದ್ದರು. ಈ ಕವಯಿತ್ರಿಯು ತನ್ನನ್ನು ಚಿಕ್ಕದೇವರಾಜರ ಕಿರಿಯ ಮಗಳೆಂದು ಕರೆದು ಕೊಂಡಿದ್ದಾಳೆ. ತಿರುಪತಿ ದೇವರಾದ ಶ್ರೀನಿವಾಸನೊಂದಿಗೆ ಪದ್ಮಿನಿ ವಿವಾಹವನ್ನು ವರ್ಣಿಸುವ 'ಪದ್ಮಿನಿ ಕಲ್ಯಾಣ' ಕಾವ್ಯವನ್ನು ಇವಳು ಬರೆದಳು. ಸ್ವತಃ ಚಿಕ್ಕದೇವರಾಜರು 'ಗೀತಗೋಪಾಲ' 'ಭಾಗವತ' 'ಶೇಷಧರ್ಮ' ಮತ್ತು 'ಚಿಕ್ಕದೇವರಾಜ ಭಿನ್ನಪಂ' ಕೃತಿಗಳ ಕತೃಗಳಾಗಿದ್ದಾರೆ. 'ಚಿಕ್ಕದೇವರಾಜ ಭಿನ್ನಪಂ' ಎಂಬ ಕೃತಿಯು ಮೇಲುಕೋಟೆ ದೇವಾಲಯದ ಪ್ರಭು ನಾರಾಯಣ ಸ್ವಾಮಿಯನ್ನು ಉದ್ದೇಶಿಸಿ ಹೇಳಿದ ಮೂವತ್ತು ಆರೋಪಗಳನ್ನು ಒಳಗೊಂಡಿದೆ. ಚಿಕ್ಕದೇವರಾಜರು ಮೇಲುಕೋಟೆ ನಾರಾಯಣನನ್ನು ತಮ್ಮ ಕುಲದೇವತೆಯೆಂದು ಕರೆದಿದ್ದಾರೆ. ಇದರಿಂದ ಅವರೊಬ್ಬರು ಶುದ್ಧ ವೈಷ್ಣರಾಗಿದ್ದರೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಅವರು ಮೇಲುಕೋಟೆ ಚೆಲುವನಾರಾಯಣ ಸ್ವಾಮಿಯ ನಿಜವಾದ ಆರಾಧಕರಾಗಿದ್ದರು. ವಜ್ರಮುಖುಟ (ವೈರಮುಡಿ) ಹಬ್ಬಕ್ಕೆ ಅವರ ಪ್ರಾಧಾನ್ಯ ನೀಡಿದ್ದರಲ್ಲದೆ 'ಗಜೇಂದ್ರ' ಹಬ್ಬವನ್ನು ಪ್ರಾರಂಭಿಸಿದರು.

ಮಧ್ಯಯುಗದ ಅಂತ್ಯಭಾಗದಲ್ಲಿ ಶ್ರೀ ವೈಷ್ಣವ ಮತದ ಹರಡುವಿಕೆ ಮತ್ತು ಅಭಿವೃದ್ಧಿಗೆ ಮೈಸೂರಿನ ಕೊಡುಗೆಯು ಗಮನಾರ್ಹವಾದುದೆಂದು ಶ್ರೀ ಎ.ಎಸ್.ಕೃಷ್ಣ ಅಯ್ಯಂಗಾರ್

ಹೇಳಿರುತ್ತಾರೆ. ಈ ಸಂದರ್ಭದಲ್ಲಿ ಮೈಸೂರು ದೊರೆಗಳಾದ ಚಿಕ್ಕದೇವರಾಜ ಒಡೆಯರು ಶ್ರೀ ವೈಷ್ಣವ ಧರ್ಮಾಭಿವೃದ್ಧಿಗೆ ಹೆಚ್ಚು ಪ್ರೋತ್ಸಾಹ ನೀಡಿದರು ಎಂದು ಹೇಳಬಹುದು.

ಚಿಕ್ಕದೇವರಾಜ ಒಡೆಯರ ನಂತರ ಆಳಿದ ಇತರ ಅರಸರು ಶ್ರೀ ವೈಷ್ಣವ ಧರ್ಮವನ್ನು ಶ್ರೀರಂಗಪಟ್ಟಣದಲ್ಲಿ ಪ್ರೋತ್ಸಾಹಿಸಿದರು. ಹೈದರ್ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲೂ ಈ ಧರ್ಮಕ್ಕೆ ಅಥವಾ ಇನ್ನಾವುದೇ ಹಿಂದೂಧರ್ಮದ ಯಾವುದೇ ಪಂಥಗಳಿಗೆ ಧಕ್ಕೆ ಉಂಟಾಗಲಿಲ್ಲ. ಟಿಪ್ಪುಸುಲ್ತಾನನು ಶ್ರೀರಂಗಪಟ್ಟಣದ ರಂಗನಾಥಸ್ವಾಮಿಗೆ ಕೆಲವು ಪದಾರ್ಥಗಳನ್ನು ದಾನ ಮಾಡಿದ ವಿಷಯ ತಿಳಿದುಬರುತ್ತದೆ. ಅನಂತರ ಅಧಿಕಾರಕ್ಕೆ ಬಂದ 3ನೇ ಕೃಷ್ಣರಾಜ ಒಡೆಯರು ಸಹ ಇಲ್ಲಿನ ಶ್ರೀ ವೈಷ್ಣವ ನೆಲೆಯನ್ನು ಪೋಷಿಸಿಕೊಂಡು ಬಂದರು. 1799ರ ನಂತರ ಶ್ರೀರಂಗಪಟ್ಟಣ ರಾಜಧಾನಿಯ ಸ್ಥಾನವನ್ನು ಕಳೆದುಕೊಂಡರೂ ತನ್ನ ಧಾರ್ಮಿಕ ಅದರಲ್ಲೂ ಶ್ರೀ ವೈಷ್ಣವ ಕೇಂದ್ರ ವಾಗಿ ತನ್ನ ಸ್ಥಾನವನ್ನು ಉಳಿಸಿಕೊಂಡಿತ್ತೆಂದು ಹೇಳಬಹುದು.

ಶ್ರೀರಂಗಪಟ್ಟಣದ ರಂಗನಾಥಸ್ವಾಮಿ ಅಲ್ಲಿಯ ಜನರಿಗೆ ಸತ್ಯ ಮತ್ತು ಧರ್ಮಗಳನ್ನು ಪ್ರತಿನಿಧಿಸುವ ಸಂಕೇತವಾಗಿದ್ದನು. ಶ್ರೀರಂಗಪಟ್ಟಣದಲ್ಲಿ ದೊರೆಯುವ ಶಾಸನಗಳ ಕೊನೆಯಲ್ಲಿ ಈ ಭಾವನೆಯನ್ನು ಪ್ರತಿನಿಧಿಸುವ ವಿಷಯ ಪ್ರಸ್ತಾಪಿಸಲ್ಪಟ್ಟಿದೆ. ಸಾಮಾನ್ಯ ದಾನ ಶಾಸನಗಳ ಕೊನೆ ಯಲ್ಲಿ ದಾನವನ್ನು ಉಲ್ಲಂಘಿಸಿದವರಿಗೆ ಬರುವ ಪಾಪದ ನಾನಾ ವಿಷಯಗಳನ್ನು ಪ್ರಸ್ತಾಪಿಸುತ್ತವೆ. ಉದಾಹರಣೆಗೆ ಒಂದು ಶಾಸನ ಈ ರೀತಿ ಘೋಷಿಸುತ್ತದೆ. "ಈ ಧರ್ಮಕ್ಕೆ ಅಳುಪಿದವರು ತಮ್ಮ ತಾಯಿ ತಂದೆಗಳನ್ನು, ಮಕ್ಕಳನ್ನು ವಾರಣಾಸಿಯಲಿ ಕೊಂದ ಪಾಪಕ್ಕೆ ಹೋದರು". ಆದರೆ ಶ್ರೀರಂಗ ಪಟ್ಟಣದಲ್ಲಿ ದೊರೆಯುವ ಶಾಸನದ ವಿಶೇಷವೇನೆಂದರೆ ಅಲ್ಲಿನ ರಂಗನಾಥ ದೇವರನ್ನು ಈ ಸಂಬಂಧದಲ್ಲಿ ಬಳಸಿಕೊಂಡಿರುವುದೇ ಆಗಿದೆ. ಅಂದರೆ ಶ್ರೀರಂಗಪಟ್ಟಣದ ಜನರು ಯಾರಾದರೂ ದಾನ ಧರ್ಮವನ್ನು ಉಲ್ಲಂಘಿಸಿದರೆ ಅಂತಹವರು "ರಂಗನಾಥ ದೇವರಿಗೆ ತಪ್ಪಿದವರು" ಎಂಬುದಾಗಿ ಶಾಸನ ಘೋಷಿಸುತ್ತದೆ.[6] ಇಲ್ಲಿ ನಾವು ಗಮನಿಸಬೇಕಾದ ಅಂಶವೆಂದರೆ ಪರಂಪರೆಯಿಂದ ಬಂದ ಶಾಪವಾಕ್ಯಗಳ ಜೊತೆ ಶ್ರೀರಂಗಪಟ್ಟಣದ ರಂಗನಾಥ ದೇವರಿಗೆ ತಪ್ಪಿದವರು ಎಂಬುದನ್ನು ಸೇರಿಸಿರುವುದು ವಿಶೇಷವಾಗಿ ಕಾಣುತ್ತದೆ. ಇದರಿಂದ ಶ್ರೀರಂಗಪಟ್ಟಣದ ಜನರಲ್ಲಿ ಅವರು ಯಾವ ಪಂಥಕ್ಕೆ ಸೇರಿರಲಿ, ಅವರೇನಾದರೂ ದಾನ ಧರ್ಮವನ್ನು ಉಲ್ಲಂಘನೆ ಮಾಡಿದರೆ ಅಂತಹವರು ರಂಗನಾಥಸಾಮಿಗೆ ತಪ್ಪಿದವರಾಗಿತ್ತಾರೆ ಎಂಬ ಭಾವನೆ ಅಂದಿನ ಜನರನ್ನು ಇದ್ದಿತು. ಸ್ಥಳೀಯ

ಪವಿತ್ರ ಕ್ಷೇತ್ರದ ಆರಾಧ್ಯ ದೈವವನ್ನು ಆ ಕಾಲದಲ್ಲಿ ಹೇಗೆ ಧರ್ಮ ಭೀತಿಯನ್ನು ಜನರಲ್ಲಿ ಉಂಟು ಮಾಡಲು ಬಳಸಿಕೊಳ್ಳುತ್ತಿದ್ದರು ಎಂಬುದಕ್ಕೆ ಇಂತಹ ವಿಶೇಷವಾದ ನುಡಿಗಟ್ಟುಗಳೂ ಉದಾಹರಣೆಗಳಾಗಿವೆ. ಇದಲ್ಲದೆ ಶ್ರೀರಂಗಪಟ್ಟಣದ ರಂಗನಾಥ ದೇವರ ಪ್ರಾಮುಖ್ಯತೆಯನ್ನು ಇದು ಅಂದಿನ ಧಾರ್ಮಿಕ ಪರಿಸ್ಥಿತಿಯನ್ನು ಎತ್ತಿ ಹಿಡಿಯುತ್ತದೆ.

ಶ್ರೀರಂಗಪಟ್ಟಣದಲ್ಲಿ ವಿಷ್ಣುವಿಗೆ ಹಲವು ಹಎಸರುಗಳು ಇದ್ದುದನ್ನು ಇಲ್ಲಿನ ಶಾಸನ ಸೂಚಿಸುತ್ತದೆ. ಅವುಗಳು ಯಾವುವು ಎಂದರೆ (1) ಶ್ರೀಹರಿ (2) ರಾಮ (3) ನಾರಾಯಣ (4) ಕೃಷ್ಣ (5) ಸರ್ವೋತ್ತಮ (6) ರಂಗನಾಥ (7) ಗೋವಿಂದ.[7] ಅಂದರೆ ಈ ಶಾಸನದ ಪ್ರಕಾರ ರಂಗನಾಥನೆ ವಿಷ್ಣು ಮತ್ತು ಆತನ ಉಳಿದ ಎಲ್ಲಾ ನಾಮಗಳು ರಂಗನಾಥನನ್ನು ನೆನಪಿಸುತ್ತವೆ ಎಂಬುದು ಈ ಶಾಸನದ ಆಶಯವಾಗಿದೆ.

ಶ್ರೀರಂಗಪಟ್ಟಣದ ಶ್ರೀ ವೈಷ್ಣವರಿಗೆ ರಂಗನಾಥಸ್ವಾಮಿ ದೇವಾಲಯ ಅವರ ಧರ್ಮದ ಕೇಂದ್ರ ನೆಲೆಯಾಗಿತ್ತು. ಈ ದೇವಾಲಯದಲ್ಲಿ ನಡೆಯುತ್ತಿದ್ದ ಅನೇಕ ಸೇವೆಗಳನ್ನು ಶಾಸನಗಳು ಹೆಸರಿಸುತ್ತವೆ. ಅವುಗಳಲ್ಲಿ ಪ್ರಮುಖವಾದ ಕೆಲವು ಸೇವೆ, ಉತ್ಸವಗಳನ್ನು ಪಟ್ಟಿ ಮಾಡಬಹುದು.

1) ದೇವತಾರಾಧನೆ
2) ಅತಿರಸ ನೈವೇದ್ಯ
3) ದಿನಂಪ್ರತಿ ನಡೆವ ಕಟ್ಟಳೆ
4) ಷೋಡಷ ಉಪಚಾರ ಪೂಜೆ[8]
5) ವಸಂತೋತ್ಸವ
6) ರಥೋತ್ಸವ[9]
7) ಪ್ರಸಾದ
8) ಕಾಣಾಚಿ[10]
9) ರಂಗನಾಯಕಿ ದೇವಿಯರ ದಿವ್ಯ ಲೀಲಾ ವಿಲಾಸ
10) ನಿತ್ಯನೈವೇದ್ಯ
11) ಕಜ್ಜಾಯ
12) ನಂದಾದೀಪ

13) ರಥೋತ್ಸವ

14) ಹೂಗಡಲೆ ಕದಲು

15) ಆರೋವಣೆ[11]

16) ನಿತ್ಯಗಟ್ಟಳೆ

17) ತಿರುಮಂಜನ ಕೈಂಕರ್ಯ[12]

18) ಅಲಂಕಾರ ದೀಪ ತಿರುಮಾಲೆ

19) ತಿರುನೆತ್ತಿ

20) ಶ್ರೀ ರಂಗನಾಯಕಿ ಅಮ್ಮನವರ ಪಾದ ಕಮಲಗಳಿಗೆ ಅಲಂಕಾರ[13]

ಶ್ರೀ ವೈಷ್ಣವ ಧರ್ಮವನ್ನು ಬಿಟ್ಟರೆ, ಶ್ರೀರಂಗಪಟ್ಟಣದಲ್ಲಿ ವೀರಶೈವರು ಇದ್ದರು. ಶೈವ ಮಠ ಮಂದಿರಗಳು ಅಸ್ಥಿತ್ವದಲ್ಲಿದ್ದವು. ಹಾಗೆಯೇ ಅನೇಕ ವಿರಕ್ತ ಮಠಗಳೂ ಇದ್ದವು.[14] ದೊಡ್ಡ ಹಂಪಯ್ಯನ ಮಠ, ಮೂಲೆಯ ಮಠ, ಲಡು ವಿರಕ್ತರ ದಿವ್ಯ ಮಠ, ದಾಸೋಹದ ಮಠ. ಹೀಗೆ ಹಲವಾರು ಲಿಂಗಾಯಿತ ಮಠಗಳು ಇದ್ದವು.[15] ಅಲ್ಲದೆ ಶ್ರೀರಂಗಪಟ್ಟಣದಲ್ಲಿ ಶೈವ ಧರ್ಮಕ್ಕೆ ಸಂಬಂಧಪಟ್ಟಂತೆ ಅನೇಕ ದೇವತೆಗಳನ್ನು ಪೂಜಿಸುತ್ತಿದ್ದರು ಎಂಬುದನ್ನು ಶಾಸನಗಳಲ್ಲಿ ಆಧಾರ ಗಳು ದೊರೆಯುತ್ತವೆ. ಶಿವನ ತಾಂಡವಮೂರ್ತಿ ದಕ್ಷಿಣ ಭಾರತದಲ್ಲಿ ಬಹಳ ಪ್ರಾಚೀನ ಕಾಲ ದಿಂದಲೂ ಪ್ರಸಿದ್ಧವಾಗಿತ್ತು. ಚೋಳರ ತಾಂಡವಮೂರ್ತಿ ವಿಗ್ರಹಗಳು ಅತ್ಯಂತ ಸುಂದರವಾಗಿವೆ. ಚೋಳರ ಪ್ರಭಾವದಿಂದ ಮುಂದೆ ಶ್ರೀರಂಗಪಟ್ಟಣದಲ್ಲೂ ಈ ರೀತಿಯ ಮೂರ್ತಿಗಳು ಕಾಣಿಸಿ ಕೊಂಡವು. ಒಂದು ಶಾಸನದ ಪ್ರಕಾರ, ಕೃಷ್ಣಮಾಚಾರಿಯ ಮಗ ವೆಂಕಟರಮಣ ಚೌರಿ ಎಂಬು ವವನು ಇಂತಹ ತಾಂಡವ ಮೂರ್ತಿಯನ್ನು ತಯಾರಿಸಿದ್ದನು. ಇದಲ್ಲದೆ ಪಾರ್ವತಿಯ ಮತ್ತೊಂದು ರೂಪವಾದ ಶಿವ ಕಾಮಿನಿ ಮೂರ್ತಿಯು ಸಹ ಶ್ರೀರಂಗಪಟ್ಟಣದಲ್ಲಿ ಜನರು ಪೂಜಿಸುತ್ತಿದ್ದರು.[16]

ಶ್ರೀರಂಗಪಟ್ಟಣದ ಆವರಣದಲ್ಲಿ ಶೈವ ದೇವಾಲಯಗಳಲ್ಲಿ ಭಕ್ತ ವಿಗ್ರಹಗಳು ಇರುತ್ತಿದ್ದವು. ಅಂತಹ 15 ಭಕ್ತ ವಿಗ್ರಹಗಳು ಇದ್ದುದನ್ನು ಒಂದು ಶಾಸನ ದಾಖಲಿಸುತ್ತದೆ ಅದು ಇಂತಿದೆ. (1) ಮಾರರುವಳಂಳ ಸುದ್ರರು, (2) ಸರಾನಕರುಣಮಾನರು (3) ಕಲಿನಿರೆಗಾಣಗರು (4) ನಿರುದಾ ಶಾದೂಲರು ಚೋಳಿ ಬ್ರಾಹ್ಮರು (5) ಕಳಾನಾಥನೆಂಬ ಬ್ರಾಂಹ್ಮಾರು (6) ಪ್ರತಾಪ ಸೂರ್ಯರು ಸಾಮಾನ್ಯ ಅರಸ (7) ಅಪ್ಪರು (8) ಮನಕೋಜಕುಳಾಳರು (9) ಧರ್ಮಕೇತನರು ಕ್ಷತ್ರಿಯರು (10)

ಮಾರರೋಮಯಾದಿ ಬ್ರಾಂಹ್ಮರು (11) ಮೂರ್ತಿನಾಥನೆಂಬ ವೈಶ್ಯರು (12) ಗ---- ರು ಜಾತಿಯ (13) ಬಾಲರ್ಹರು ಬ್ರಾಂಹ್ಮರು (14) ಶ್ರೀ ನೀಲಕಂಠ ಕುಂಬಾರರು (15) ಹುತವಳಿ ವೈಶ್ಯಸ್ತ್ರೀ.[17]

ಶೈವ ಧರ್ಮಕ್ಕೆ ಸಂಬಂಧಪಟ್ಟಂತೆ ಹೇಳುವುದಾದರೆ ಶ್ರೀರಂಗಪಟ್ಟಣದಲ್ಲಿ ಪ್ರಸಿದ್ಧವಾದ ಗಂಗಾಧರೇಶ್ವರ ದೇವಸ್ಥಾನ ಮತ್ತು ಈ ದೇವಾಲಯಕ್ಕೆ ಭಕ್ತಾಧಿಗಳು ಭೂಮಿಯನ್ನು ದಾನವಾಗಿ ನೀಡಿದ್ದರು. ಮಂಟಪಗಳನ್ನು ಕಟ್ಟಿಸಿಕೊಟ್ಟಿದ್ದರು. ದೇವಾಲಯದ ಆವರಣದೊಳಗೆ ಶಿವನ ನಾನಾ ರೂಪದ ವಿಗ್ರಹಗಳನ್ನು ತಯಾರಿಸಿ ಇಟ್ಟಿದ್ದರು.[18]

## ಜೈನಧರ್ಮ

ಹಿಂದೂ ಧರ್ಮದ ಅನೇಕ ಪಂಥಗಳಲ್ಲದೆ ಒಡೆಯರ ರಾಜಧಾನಿಯಾಗಿದ್ದ ಶ್ರೀರಂಗಪಟ್ಟಣ ದಲ್ಲಿ ಜೈನ ಧರ್ಮಕ್ಕೆ ಸ್ಥಾನವನ್ನು ಕಲ್ಪಿಸಿಕೊಡಲಾಗಿತ್ತು ಎಂಬುದಕ್ಕೆ ಇಲ್ಲಿ ದೊರೆಯುವ ಶಾಸನ ಆಧಾರವಾಗಿದೆ. ಕರ್ನಾಟಕ ಮೌರ್ಯರ ಕಾಲದಿಂದಲೂ ಜೈನ ಧರ್ಮಕ್ಕೆ ಆಶ್ರಯ ನೀಡಿದ್ದಿತು. ಗಂಗ, ಚಾಳುಕ್ಯ, ರಾಷ್ಟ್ರಕೂಟರು ಮತ್ತು ಹೊಯ್ಸಳರ ಕಾಲದಲ್ಲಿ ಈ ಪ್ರದೇಶದಲ್ಲಿ ಜೈನಧರ್ಮ ಉತ್ಕರ್ಷ ವನ್ನು ಕಂಡಿದ್ದಿತು. ವಿಜಯನಗರ ಕಾಲದಲ್ಲಿ ಬಯಲು ನಾಡಿಗಿಂತ ಕರಾವಳಿ ಪ್ರದೇಶದಲ್ಲಿ ಈ ಧರ್ಮ ಹೆಚ್ಚು ಜನಪ್ರಿಯವಾಗಿತ್ತು. ಆದರೆ ಒಡೆಯರ ಕಾಲದಲ್ಲಿ ಜೈನ ಮಂತ್ರಿಗಳು, ಅಧಿಕಾರಿ ಗಳು, ವರ್ತಕರು ಮತ್ತು ಮುನಿಗಳು ಇದ್ದರು. ಶ್ರವಣಬೆಳಗೊಳ ಅವರ ಪವಿತ್ರ ಕ್ಷೇತ್ರವಾಗಿತ್ತು. ವಿಶಾಲಾಕ್ಷ ಪಂಡಿತ ಎಂಬುವವನು ಚಿಕ್ಕದೇವರಾಜ ಒಡೆಯರ ಮಂತ್ರಿಯಾಗಿದ್ದನು. ಈತನು ಜೈನ ಧರ್ಮದ ಅನುಯಾಯಿಯಾಗಿದ್ದನು. ಈ ಹಿನ್ನಲೆಯಲ್ಲಿ ರಾಜಧಾನಿ ಶ್ರೀರಂಗಪಟ್ಟಣದಲ್ಲಿ ಜೈನ ಧರ್ಮದ ಸಂಕೇತವಾಗಿದ್ದ ಬಸದಿ ಇದ್ದಿತು. ಇಲ್ಲಿನ ಬಸದಿಗೆ ಆದೀಶ್ವರ ಬಸದಿ ಎಂದು ಕರೆಯುತ್ತಿದ್ದರು. ಶಾಸನ ಪ್ರಕಾರ ಪಾಯಣ್ಣ ಮತ್ತು ಇನ್ನೊಬ್ಬ ವ್ಯಕ್ತಿ ಕೂಡಿ ಈ ಬಸದಿಗೆ ಹಣವನ್ನು ದಾನ ಮಾಡಿದರು. ಪ್ರಾಯಶಃ ಇವರು ಶ್ರೀರಂಗಪಟ್ಟಣದಲ್ಲಿ ಜೈನ ವರ್ತಕರಾಗಿದ್ದಿರ ಬಹುದು. ಶಾಸನವೇ ತಿಳಿಸುವಂತೆ ಈ ದಾನಿಗಳು ಚಾರುಕೀರ್ತಿ ಪಂಡಿತಾಚಾರ್ಯರ ಶಿಷ್ಯರಾಗಿದ್ದರು. ಆದೀಶ್ವರ ಬಸದಿ ಎಂದರೆ ಜೈನ ತೀರ್ಥಂಕರರಲ್ಲಿ ಮೊದಲಿಗನಾಗಿದ್ದ ಆದಿನಾಥ ಬಸದಿ ಇದಾಗಿತ್ತೆಂದು ಹೇಳಬಹುದು. ಜೈನರು ತಮ್ಮ ಬಸದಿಯನ್ನು ಮತ್ತು ಅಲ್ಲಿನ ಆವರಣದೊಳಗೆ ನಡೆಯುತ್ತಿದ್ದ ಸೇವೆಗಳನ್ನು ನಡೆಸಿಕೊಂಡು ಹೋಗುವುದಕ್ಕೆ ಯಾವ ತರಹದ ಏರ್ಪಾಡು ಮಾಡಿದ್ದರು ಎಂಬುದನ್ನು ಶಾಸನವು ತಿಳಿಸುತ್ತದೆ. ಅದರ ಪ್ರಕಾರ ಈ ಕಾರ್ಯಗಳಿಗಾಗಿ ದಾನದಿಂದ

ಬರುವ ಹಣವನ್ನು ಬಂಡವಾಳವನ್ನಾಗಿಸಿಕೊಂಡು ಅದನ್ನು ಬಡ್ಡಿಗಾಗಿ ನೀಡಿ ಆ ಬಡ್ಡಿಯ ಹಣದಿಂದ ಬಸದಿಯ ಸಮಸ್ತ ಕಾರ್ಯಗಳನ್ನು ನಡೆಸಿಕೊಂಡು ಹೋಗುತ್ತಿದ್ದರು. ಇಂತಹ ಕಾರ್ಯಗಳನ್ನು 'ಅಷ್ಟಾಹ್ನಿಕದ ಧರ್ಮ' ಎಂದು ಕರೆಯುತ್ತಿದ್ದರು. ಶ್ರೀರಂಗಪಟ್ಟಣದ ಆದೀಶ್ವರ ಬಸದಿಯ ಸಮಸ್ತ ಕಾರ್ಯಗಳನ್ನು ಸೀತಾಳ ಮಳಿಗೆಯ ಸಮಸ್ತರು ನೋಡಿಕೊಂಡು ಹೋಗುತ್ತಿದ್ದರು. ಆ ಶಾಸನದ ಪಾಠ ಇಂತಿದೆ. "ಶ್ರೀ ಶಕವರ್ಷ 1589ನೆಯ ಪರಾಭವ ಸಂವತ್ಸರದ ಆಷಾಢ ಶುಕ್ಲ ಶ್ರೀರಂಗ ಪಟ್ಟಣದ ಆದೀಶ್ವರರ ಭಂಡಾರಕೆ ಚಾರುಕೀರ್ತಿ ಪಂಡಿತಾಚಾರ್ಯರ ಶಿಷ್ಯರಾದ ಪಾಯಂಣಗಳು. ಜಯ್ಯನವರು ಕೊಟ್ಟದು ನಗ 288 ಕ್ಕೆ ಬಡ್ಡಿ ಕಗು 383ಕ್ಕೆ ಅಷ್ಟಾಹ್ನಿಕದ ಧರ್ಮವನ್ನು ಶ್ರೀ ಸೀತಾಳ ಮಳಿಗೆಯ ಸಮಸ್ತರು ನೆಲತರವಾಗಿ ನಡೆಸಿಕೊಡಲುಳ್ಳವರು ಎಂದು ಬರೆಸಿಕೊಟ್ಟ ಶಾಸನ. ಇದಕ್ಕೆ ವಿಘ್ನವ ಮಾಡಿದವನು ನರಕಾದಿ ದುರ್ಗತಿಗೆ ಹೋಗುವನು."[19]

ಜಾನಪದ ದೇವತೆಗಳು ಕೋಟೆಯ ಒಳಗೆ ಇದ್ದವು. ಅವುಗಳ ಪೈಕಿ ಚಾಮುಂಡಿ, ಕಾಳಿ, ಮಾರಮ್ಮ ಬಹಳ ಮುಖ್ಯವಾದವು. ಶ್ರೀರಂಗಪಟ್ಟಣದಲ್ಲಿ ಮಾರಮ್ಮನ ಗುಡಿಗೆ ಸಂಬಂಧಿಸಿದ ಒಂದು ಶಾಸನ ಈ ರೀತಿ ಇದೆ. "ಸ್ವಸ್ತಿ ಶ್ರೀ ವಿಜಯಭ್ಯುದಯ ಶಾಲಿವಾಹನಶಬಾವರುಷಂಗಳು 1785 ಸಂದ ವರ್ತಮಾನವಾದ ದುಂದುಭಿ ಸಂ ಜ್ಯೇಷ್ಠ ಶುದ್ಧ 3 ಸ್ತಿರವಾದ ವಾರಾಭ್ಯ ಶ್ರೀರಂಗಪಟ್ಟಣ ಸಂಣನರ ಕೋಟೆ.. ಣ ಗಂಜಾಂ.. ಭಯ. ಕೊಗ್ರಾಮ ... ಯ... ಸಕಲ ಕೋಮ... ನವರು ಮಾಡಿದ ಕಾರ್ಯ ಮಾರಿಗುಡಿ ಜೀರ್ಣೋದ್ಧಾರ ದೇವಾಲಯ ಕಟೂವದಕೆ ಹನುಮಂತೈನ ಮಗ ಬಿಲ್ಲೆ ತಿಂಮೈನ ಗೊತ್ತು ಮಾಡಿ ನೀವೆಲ್ಲರೂ... ಕೊಟ್ಟೊ ಜೀರ್ಣೋದ್ಧಾರ ಮಾಡಿಸಿ ಕಟ್ಟಿಸಿರುವ ದೇವಾಲಯ ಮಾರಿ ಪೂಜೆ ಮೀರ್ತದಂತೆ ಸದಾಕಾಲ ಸೇವೆ ನಡೆಸುತ್ತ ಸರ್ವೇ ಜನಾ ಸುಖಿನೋ ಭವಂತುವಿಯಲ್ಲಿ ಕಾವಲು ದುಬಾಸಿ ಮಗನ ವಂಶಸ್ಥರದು" ಎಂದಿದೆ. ಮೇಲಿನ ಶಾಸನದಿಂದ ಕೆಲವು ವಿಷಯಗಳು ಸ್ಪಷ್ಟವಾಗುತ್ತವೆ. ಒಂದನೆಯದಾಗಿ, ಈ ಶಾಸನವು ಮಾರಿಗುಡಿಯ ಜೀರ್ಣೋದ್ಧಾರವನ್ನು ಕುರಿತಂತೆ ಪ್ರಸ್ತಾಪಿಸುತ್ತದೆ. ಅಂದರೆ ಶಾಸನದ ಕಾಲಕ್ಕಿಂತಲೂ ಬಹಳಷ್ಟು ಹಿಂದೆ ಈ ಗುಡಿ ಇದ್ದಿತ್ತೆಂಬುದು ಸ್ಪಷ್ಟ. ಈ ದೇವತೆ ಶ್ರೀರಂಗಪಟ್ಟಣದ ಜನಸಾಮಾನ್ಯರ ಆರಾಧ್ಯ ದೈವವಾಗಿತ್ತು. ಎರಡನೆಯದಾಗಿ, ಈ ಶಾಸನವು ಜೀರ್ಣೋದ್ಧಾರ ಕಾರ್ಯದಲ್ಲಿ ಭಾಗವಹಿಸಿದ ಒಬ್ಬನ ಕೆಲಸಗಾರನ ಹೆಸರನ್ನು ಸೂಚಿಸುತ್ತದೆ. ಅವನು ಯಾರೆಂದರೆ ಬಲ್ಲೆ ತಿಮ್ಮಯ್ಯ. ಈತನು ಹನುಮಂತಯ್ಯ ಎಂಬುವವನ ಮಗನಾಗಿದ್ದನು. ಮೂರನೆಯದಾಗಿ, ಮಾರಿಗುಡಿಯ ಜೀರ್ಣೋದ್ಧಾರ ಕಾರ್ಯಕ್ಕೆ ಬೇಕಾದ ಧನ ಸಹಾಯವನ್ನು ನೀಡಿದ ವಿಷಯವನ್ನು ಶಾಸನ ಪ್ರಸ್ತಾಪಿಸುತ್ತದೆ. ಆದರೆ ದಾನಿಗಳ ಹೆಸರು

ಶಾಸನದಲ್ಲಿ ಅಳಿಸಿ ಹೋಗಿದೆ. ನಾಲ್ಕನೆಯದಾಗಿ, ಮಾರಿಗುಡಿಯಲ್ಲಿ ಪೂಜೆ ಮತ್ತು ಸೇವೆ ಯಾವಾಗಲೂ ನಡೆಯುತ್ತಿರಬೇಕು ಎಂಬ ಆಶಯವನ್ನು ಶಾಸನ ವ್ಯಕ್ತಪಡಿಸುತ್ತಾ ಈ ಕಾರ್ಯಕ್ಕೆ ದುಬಾಸಿ ಕುಟುಂಬದ ಸದಸ್ಯರನ್ನು ನೇಮಿಸುತ್ತದೆ. ಹೀಗೆ ಈ ಶಾಸನವು ಶ್ರೀರಂಗಪಟ್ಟಣದ ಒಳಗೆ ಜಾನಪದ ದೇವತೆಗೆ ಇದ್ದ ಗುಡಿಯ ಅಸ್ಥಿತ್ವವನ್ನು ಸೂಚಿಸುವುದರ ಜೊತೆಗೆ ಅಲ್ಲಿನ ವ್ಯವಸ್ಥೆಯ ಒಳನೋಟವನ್ನು ಇದು ದಾಖಲಿಸುತ್ತದೆ.[20]

ಮಾರಮ್ಮನ ನಂತರ ಶ್ರೀರಂಗಪಟ್ಟಣದಲ್ಲಿ ಇದ್ದ ಜಾನಪದ ದೇವತೆ ಕಾಳಮ್ಮ. ಈಕೆಯ ಗುಡಿ ಶ್ರೀರಂಗಪಟ್ಟಣದಲ್ಲಿ ಇದ್ದಿತು. ಅದಕ್ಕೆ ಸಂಬಂಧಪಟ್ಟ ಶಾಸನವನ್ನು ಇಲ್ಲಿ ಉಲ್ಲೇಖಿಸ ಬಹುದು. "ಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕವರ್ಷಂಗಳೂ 1787ನೇ ರಕ್ಷಾಕ್ಷಿ ಸಂ। ಬಾದ್ರಪತ ಶುದ್ಧ 13 ಲ್ಲು ಶ್ರೀ ಮತ್ಕಾಳಿಕಾಂಬ ಕಮಠೇಶ್ವ ಸ್ವಾಮಿ ಸನ್ನಿಧಿಗೆ, ಸುಪರ್ನಸ ಗೋತ್ರ, ಕಾತ್ಯಾಯಸೂತ್ರ ಪ್ರಣಮಶ್ಯಾಖ ಈ ಶಾಂನ್ಯ ಪ್ರವರೋತ್ಪಂನ್ನರಾದ ಯಜಮಾನರು ಗೋಪಾಲಯ್ಯನವರ ಕುಮಾರ ಲಕ್ಕೆನಾಚಾರ್ಯರ ಶೇವಾರ್ಥ."[21]

ಈ ಶಾಸನದಿಂದ ಅನೇಕ ವಿಷಯಗಳು ತಿಳಿದು ಬರುತ್ತವೆ. ಈ ಕಾಳಮ್ಮನ ದೇವಸ್ಥಾನದಲ್ಲಿ ಕಮಠೇಶ್ವರ ದೇವರು ಎಂಬ ವಿಗ್ರಹಕ್ಕೆ ಪೂಜೆ ನಡೆಯುತ್ತಿತ್ತು. ಆ ಕಮಠೇಶ್ವರ ದೇವರ ಬಾಗಿಲಿಗೆ ಹಿತ್ತಾಳೆ ತಗಡನ್ನು ಹೊಡೆಸಿದ್ದರು. ಲಕ್ಕಣ್ಣಚಾರ್ಯ ಎಂಬುವವನು ಈ ಸೇವೆಯನ್ನು ಮಾಡಿದ್ದನೆಂದು ಶಾಸನ ತಿಳಿಸುತ್ತದೆ. ಕಾಳಮ್ಮನ ಶಿಷ್ಟ ರೂಪದಲ್ಲಿ ಚಾಮುಂಡೇಶ್ವರಿ ಯಾಗಿ ಮೈಸೂರಿನಲ್ಲಿ ಬೆಟ್ಟದ ಮೇಲೆ ಒಡೆಯರ ಆರಾಧ್ಯ ದೇವತೆಯಾಗಿ ಕಾಣಿಸಿಕೊಂಡಳು ಎಂದು ಹೇಳಬಹುದು.

ಕೋಟೆಯನ್ನು ರಕ್ಷಿಸುವ ಆಂಜನೇಯನ ಗುಡಿ ಇದ್ದಿತು. ಶ್ರೀರಂಗಪಟ್ಟಣದ ಒಳಗೆ ಶಿಷ್ಟ ವರ್ಗದವರೆ ಹೆಚ್ಚಾಗಿದ್ದುದರಿಂದ ಅಲ್ಲಿ ಜಾನಪದ ಧರ್ಮದ ಕುರುಹುಗಳು ಹೆಚ್ಚಾಗಿ ಸಿಕ್ಕುವುದಿಲ್ಲ. ಇದಲ್ಲದೆ ಶ್ರೀರಂಗಪಟ್ಟಣವು ನಗರ ಸಂಸ್ಕೃತಿಯನ್ನು ಹೆಚ್ಚಾಗಿ ಪ್ರತಿಬಿಂಬಿಸುತ್ತಿತ್ತು ಎಂಬುದನ್ನು ನಾವು ಮರೆಯಬಾರದು. ಕೋಟೆಯ ಒಳಗಿನ ಅಗ್ರಹಾರಗಳು ಧಾರ್ಮಿಕ ಕೇಂದ್ರಗಳಾಗಿದ್ದವು. ಈ ಅಗ್ರಹಾರಗಳಲ್ಲಿ ಪಂಡಿತರು ಧಾರ್ಮಿಕ ವಿದ್ಯಾಭ್ಯಾಸವನ್ನು ನೀಡುತ್ತಿದ್ದರು. ಕವಿಗಳು ಮತ್ತು ಪಂಡಿತರು ಇಂಥಹ ಅಗ್ರಹಾರಗಳಲ್ಲಿ ವಾಸಿಸುತ್ತಿದ್ದರು.

ಶ್ರೀರಂಗಪಟ್ಟಣದಲ್ಲಿ ಇಸ್ಲಾಂ ಧರ್ಮ ಹೈದರ್ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲಿ ಹೆಚ್ಚಾಗಿ ಅಭಿವೃದ್ಧಿಯನ್ನು ಸಾಧಿಸಿತು. ಇವರ ಕಾಲದಲ್ಲಿ ಶ್ರೀರಂಗಪಟ್ಟಣ ಪ್ರದೇಶದಲ್ಲಿ ಮಸೀದಿಗಳು ಮತ್ತು ದರ್ಗಾಗಳು ಕಟ್ಟಲ್ಪಟ್ಟವು. ಮುಸ್ಲಿಂ ಅಧಿಕಾರಿಗಳು, ಸೈನಿಕರು ಮತ್ತು ಊಳಿಗದ ಜನರು ಈ ಪ್ರದೇಶದಲ್ಲಿ ಇವರ ಆಶ್ರಯದಲ್ಲಿ ವಾಸಿಸುತ್ತಿದ್ದರು. ಶ್ರೀರಂಗಪಟ್ಟಣದ ಕೋಟೆಯ ಹೊರಗಿನ ಗಂಜಾಂ ಪ್ರದೇಶವು ಸಹ ಮುಸ್ಲಿಂರ ನೆಲೆಯಾಗಿ ಸ್ಥಾಪಿತವಾಯಿತು. ಹಿಂದೂ ಮತ್ತು ಮುಸ್ಲಿಂರು ಪರಸ್ಪರ ಸೌಹಾರ್ಧದಿಂದ ವಾಸ ಮಾಡುತ್ತಿದ್ದರು. ಅವರ ನಡುವೆ ಧಾರ್ಮಿಕ ಕಾರಣಗಳಿಗಾಗಿ ಶ್ರೀರಂಗಪಟ್ಟಣದಲ್ಲಿ ಘರ್ಷಣೆ ನಡೆದುದಕ್ಕೆ ಯಾವ ದಾಖಲೆಗಳು ಇಲ್ಲ.

ಶ್ರೀರಂಗಪಟ್ಟಣದಲ್ಲಿ ಇಸ್ಲಾಂ ಧರ್ಮ ಮತ್ತು ಅದರ ಅನುಯಾಯಿಗಳ ಚಟುವಟಿಕೆಗಳನ್ನು ದಾಖಲಿಸಿರುವ ಕೆಲವು ಶಾಸನಗಳು ಇಲ್ಲಿನ ಮಸೀದಿ, ಗಂಜಾಂನ ಗುಂಬಜ್, ದರ್ಗ ಮತ್ತು ಗೋರಿಗಳ ಮೇಲೆ ದೊರೆಯುವ ಕೆಲವು ಬರವಣಿಗೆಗಳಿಂದ ಗೊತ್ತಾಗುತ್ತದೆ. ಅವುಗಳು ನೀಡುವ ವಿವರಗಳನ್ನು ಇಲ್ಲಿ ಪ್ರಸ್ತಾಪಿಸಬಹುದು.

ಶ್ರೀರಂಗಪಟ್ಟಣದ 45ನೇ ಶಾಸನ ಸಂಗೀನ್ ಮಸೀದಿಯ ಬಳಿ ದೊರೆತಿದೆ. ಈ ಶಾಸನ ಕನ್ನಡದಲ್ಲಿದೆ. ತುರುಕರಿಗೆ ಶ್ರೀ ವೈಷ್ಣವ ಗುರುಗಳು ನೀಡಿದ ದಾನವನ್ನು ಇದು ದಾಖಲಿಸುತ್ತದೆ. ವಿವರಗಳು ಸ್ಪಷ್ಟವಾಗಿಲ್ಲ, ಶಾಸನದ ಪಾಠ ಇಂತಿದೆ. "----- ಸಂವತ್ಸರದ ಭಾದ್ರಪದ ಸು--- ಶ್ರೀಮತೇ ರಾಮಾನುಜಾಯ ನಮಃ ಶ್ರೀ ಮದ್ವೇದ ಮಾರ್ಗ ಪ್ರತಿಷ್ಟಾಪನಾಚಾರ್ಯ ಶ್ರೀ ಮದುಭಯ ವೇದಾಂತಾಚಾರ್ಯ...ಯನು.. ಯರದು ತೆರಿಯಬೊಗಿ...ಪ...ಣಿ ತುರುಕರಿಗೆ ಕೊಟ ಶಿಲಾಸೆಸಾನ ಪಟಣಕೆ ... ಹ.. ರಾಜಕಾ... ರ..ಗ ನೀವು ಯಿಂದ... ... ದ..ದು ಕೊಟವೆನಲಾಗಿ ನಾವು ನಿಮ್ಮ ..... ನತ ನೀವು ...ಯಿಂದ ಕೊಂಡು ಹೋಗುವರು ಯ.... ದಂಡಿಗ ಪದನು ಮುತು ಹವಳ ಆನಿರದ ಕೊಂಡು ... ಟೆನು ಯಿದಮಾಡಿದೂ ಧರ್ಮ ಮುತು ಹವಳ .... ಯೆನ ತಂದದು. ಸುಂಕದಲಿ ಆದೂಗಿಯಲೆ ಉಮರ ... ಕಂದಾಯ ಕಾಣೀಕೆಗೆ ಕೊಳದೆ ಸರ್ವಮಾನ್ಯವಾಗಿ ... ಯಿದಕೆ ತಪಿ ------------------------ ವೊಡವೆಗೆ ಆಸೆ ಮಾಡಿದರೆ ಅವನು ದೇವ ಬ್ರಾಂಹ್ಮರಿಗೆ. ಹೊತು ಅವನಾಜಿ ---- ನಗರ ಮಗನು ---- ಸಾಸನ ಗಾಳಿ ಬಇಸಿಲು ಹೊರತಾಗಿ ಸುಖದಲಿ ... ಪ... ಶ್ರೀಶ್ರೀ ಸ್ತಳಕುಳದ ಪ್ರಜೆಗಳು ಆ...ಳ...ಕೊ.ಲಸ. ಯಿದಕೆ ತಪಿದರೆ

ಸತೆತ್ತಿಂದಗೆ'. ಈ ಶಾಸನವು ಹಿಂದೂ ಮತ್ತು ಮುಸ್ಲಿಂರ ನಡುವೆ ಇದ್ದ ಭಾತೃ ಭಾವವನ್ನು ವ್ಯಕ್ತ ಪಡಿಸುತ್ತದೆ.[22]

ಶ್ರೀರಂಗಪಟ್ಟಣದ 47ನೇ ಶಾಸನ ಅರಾಬಿಕ್ ಭಾಷೆಯಲ್ಲಿದೆ. ಪ್ರವಾದಿ ಮಹಮ್ಮದರನ್ನೂ ಕುರಿತಂತೆ ಇರುವ ಒಂದು ಸಂಪ್ರದಾಯವನ್ನು ಇದು ಪ್ರಸ್ತಾಪಿಸುತ್ತದೆ. ಶ್ರೀರಂಗಪಟ್ಟಣದ ಮೇಲೆ ಎರಗಿರುವ ಶತ್ರುಗಳನ್ನು ಎದುರಿಸಲು ಪ್ರವಾದಿ ಮಹಮ್ಮದರು ಹೋರಾಡಿದ ರೀತಿಯಲ್ಲಿ ಮುಸ್ಲಿಂರು ಶತ್ರುಗಳ ವಿರುದ್ಧ ಅಗತ್ಯವಾದ ಕ್ರಮಗಳನ್ನು ತೆಗೆದುಕೊಳ್ಳಬೇಕು ಎಂದು ಈ 18ನೇ ಶತಮಾನದ ಶಾಸನ ದಾಖಲಿಸುತ್ತದೆ. ಶತ್ರುವಿಗೆ ಮುಸ್ಲಿಂ ಸಹಾಯ ಮಾಡುವುದು ಅಪಮಾನ, ಅವರ ವಿರುದ್ಧ ಹೋರಾಡುವುದು ಧರ್ಮ. ಇದಕ್ಕಾಗಿ ವಿರುದ್ಧವಾಗಿ ನಡೆಯುವ ಮುಸ್ಲಿಂರನ್ನು ಬಂಧಿಸಿ ಶಿಕ್ಷಿಸ ಲಾಗುವುದು ಎಂದು ಶಾಸನ ಘೋಷಿಸುತ್ತದೆ. ಶ್ರೀರಂಗಪಟ್ಟಣದ ಮಸೀದಿಯ ಉತ್ತರದ ಗೋಡೆಯ ಮೇಲೆ ಇರುವ ಶಾಸನ ಇಂತಿದೆ" ಅನ್ ಅಬೀ ಹಯರೈರತ ಅನ್ನ್ ಅಲ್ ನಬಿಯ್ಯ ಸಲ್ಲಲ್ಲಾಹು ಅಲೈಹಿ ವಾ ಸಲ್ಲಮ ಖಾಲ ಅಲ್ ನಾಸು ತಬಿ ಅಲ್ಲಿ ಖುರೈಷಿ ಫಿ ಹಾಧಷ್ಷಾನಿ ಮುಸ್ಲಿಮುಹುಮ್ ತಬಿ ಅಲ್ ಲಿ ಮುಸ್ಲಿಮಹಿಮ್ ವ ಕಾಫಿರಹುಮ್ ತಬಿಅಲ್ ಲಿ ಕಾಫಿರಿಹಿಮ್ ಮುತ್ತಾಫಕುನ್ ಅಲೈಹಿ.

ರಿವಾಯತ್ ಅಸ್ತ ಅಜ್ ಅಬಿ ಹುರೈರಾ ಕಿ ತಹಖೀಖ ನಬೀ ಸಲ್ಲಾಲ್ಲಾಹು ಅಲೈಹಿವ ಘರ್ಮೂದ್ ಜಮೀ ಇ ಇಮರ್‌ದುಮ್ ಇತಾಬಿ 'ಇ ಖುರೈಷ್‌ರಾದರ್' ಈನ್‌ಷಾನ ಮುಸಲ್ಮನಾನ್ ತಾ ಬಿ' ಅನ್ದ ಮುಸಲ್ಮನಾನ್ ಇ ಖುರೈಷ್ ರವ ಕಾಫಿರಾನ್ ತಾಬಿ ಅನ್ದ ಕಾಫಿರಾನ್ ಇ ಖುರೈಷ್ ರ ಮುತ್ತಫಖ್ ಅಲೈ ವ ನ ಸಬೂ ಅಲೈಹಿಮುಲ್ ಮಜಾನೀಖ ಕಮಾನಸಖ ರಸೂಲುಲ್ಲಾಹಿ ಸಲ್ಲಲ್ಲಾಹು ಅಲೈಹಿವ ಸಲ್ಲಮ ಅಲತ್ತಾ' ಇಫಿ ವ ಹರ್ರಖೂ ಅನ್ನ್ ಹೂ ಅಲೈಹಿಸ್ ಸಲಾತು ವಸ್ ಸಲಾಮು ಅಹರಖಲ್ ಖವೀಬತವ ಅರ್ಸಲೂ ಅಲೈಹಿಮುಲ್ ಮಾಅವ ಖತ್ತ 'ಊ ಅಷಜಾರಹುಮ್ ವ ಅಫ್ಸದೂ ಜುರಹಮ್ ಲಿ ಅನ್ನ ಫಿ ಧಾ ಲಿಕ ಕಸ್ರು ಕ್ನಾಕತಿಹಿಮ್ ವ ತಫರೀಖಿ ಜಮ್ ಇಹಿಮ್ ಫ ಯಕೂನು ಮಷ್ರೂಅನ್ ವ ಖರ್ ಷಾ ದಾರೀದ್ ಬರ್ ಮುಷ್‌ರಿಕಾನ್ ತೀರ್ ಒ ತುಫಂಗ ವ ರಖ್ಷ್ ಚುನನ್ ಕಿ ಬರ್‌ಷಾ ದಾಪ್ತ ಬೂದ್

ರಸೂಲ್ ಉಲ್ಲಾಹ್ ಸಲ್ಲಲ್ಲಾಹು ಅಲೈಹಿ ವ ಸಲ್ಲಮ್ ಬರ್ ತಾ ಇಫ್ ವ ಬುಸೂಜೀದ್ ಆನ್‌ಹ ಜೀರಾಕಿ. ಅಲೈಹಿಸ್ ಸಲಾತು ಏಸ್ ಸಲಾಮ್ ಬುಸೂಖ್ತ ಖವೀಜ ರಾವ ಇರ್‌ಸಾಲ್ ನುಮಾ ಈದ್ ಬರ್ ಆನ್ ಕಾಥರಾನ್ ಆಖ್ ರಾವ ಬುಜ್‌ರೀದ್ ದರಖಥಾ ಇ ಈಷಾನ್ ರಾವ ತಬಾಹ್ ಸಜೀದ್ ಕಿಪ್ತ ಬ ಕಾರ್ ಇ ಈಷಾನ್ ರಾ ಜಿರಾಕಿ ತಹ್ ಖೀಖ್ ದರ್, ಆನ್ ಷಿಕಸ್ತ ಇ ಷೌಕತ ಇ ಆನ್‌ಹಾಸ್ತ್ವ ಪರಾಗಂದಗೀ ಇ ಜಾಮ್ ಇಯ್ಯತ್ ಇ ಈಷಾನ್ ಪಸ್ ದರ್‌ಷರ್ 'ಅ' ಈನ್ ಹಯ, ಉಮೂರ್ ರವಾಸ್ತ-ಮನ್, ಆ ಹಬ್ಬ ಅಖಾಹು ಫಲ್ ಯ, ಅಲ್ಲಿಮ್ ಇಯ್ಯಾಹುಯ 'ನೀ ಷಖ್ಸೀ ಕಿ ದೋಸ್ತ ದಾರದ್ ಬಿರಾದರ್ ಇ ಮೋಮಿನ್ ಇ ಖುದ್ ರಾ ಪಸ್ 'ಅಗಾಸ್ ನು ಮಾಯದ್ ಊರಾ

ಕಸೀ ಕಿ ಇ 'ಆನತ್ ಇ ಜಂಗೀಕುಫ್ಫಾರ್ ಬುಕುನದ್ ದರ್ ಹರ್‌ಬ್ ಬಿನಫ್ ಸಿಹೀ ಯಾ ನೀ ಖುದ್ ಷರೀಕ್ ಖಿಚ್‌ವದ್ ಯಾ ಬಮಾಲ್ ಯ ಬ ಇಸ್ಲಹ ಇಜಂಗ ಪಸ್ ಅಗರ್ ಮಾ' ಲೂಮ್ ಷವದ್ ಅಜೂ ಮೀಲ್ ಒ ರಘಬತ್ ಬ ತರಥ ದೀನ್ ಇ ಕುಫಾರ್ ಪಸ್ ಊ ಅಜ್ ಕುಫಾರ್ ಅಸ್ತ ಅಗರ್ ಮಾ'ಲೂಮ್ ನಷವದ್ ರಘಬತ್ ಪಸ್ ಖೈದ್ ಕರ್ದ ಮೀ ಪವದ್ ವ ತಜೀರ್ ಮೀ ಷವದ್.[23]

ಶ್ರೀರಂಗಪಟ್ಟಣದ 48ನೇ ಶಾಸನ ಅದೇ ಮಸೀದಿಯ ಪಶ್ಚಿಮ ಗೋಡೆಯಲ್ಲಿ ಕೆತ್ತಲ್ಪಟ್ಟಿದೆ. ಇದು ಮಸೀದಿಯನ್ನು ಕಟ್ಟಿದ ಕಾಲವನ್ನು ಸೂಚಿಸುವುದರ ಜೊತೆಗೆ ಅದನ್ನು ಕಟ್ಟಿಸಿದವನು ಟಿಪ್ಪು ಸುಲ್ತಾನ್ ಎಂದು ತಿಳಿಸುತ್ತದೆ. ಮಸೀದಿಯ ಕಾಲ 1782. ಅದರ ಪಾಠ ಇಂತಿದೆ. "ಗರ್ ಹದರತ್ ಇ ಸುಲೈಮಾನ್ ಅಂದರ್ ಜಮೂನ್ ಇ ಮಾಜಿ ತಾಮೀರ್ ಮಸ್‌ಜಿದೆ ಕರ್ದ ನಾಮಷ್ ನಿಹಾದ್ ಅಬ್ಸಾ. ದರ್‌ಈನ್ ಅವಾನ್ ಇಥರೂಖ ಸುಲ್ತಾನ್ ಇ ದೀನ್ ಬಿನಾ ಕರ್ದ ಅನ್ ಮಸ್‌ಜದೀ ಕಿ ಇಸ್‌ಮಷ್ ಮುಲ್‌ಹಿಮ್ ಗಂಜಾಪ್ತ ಆಲಾ ತಾಖಸ್ತ ಚೂನ್ ಮಹ್ ಇಸೌ ತಾಖಷ್ ಬ ಹುಸ್ನ ಒ ಖೂಬೀ ರವ್ವಷ್ ಚೊ ರೂಹ್ ಬಾಷದ್ ದಿಲ್ ಚಸ್ಪ ಖ ಫೈಜ್ ಪೀರಾ. ದಾರದ್ ನಿಷಾನ್ ಇ ಮರ್ವ, ಆನ್ ಸುಫಾ ಇ ಸಫಾಬೀಜ್ ಮಿಹ್‌ರಾಖ್ ಇ ದಿಲ್‌ಕಷ್ ಇಲಾ ಆ ಈನದಾರ್ ಇ ಬಥಾ. ಮಾನಿನ್ದ್ಹ ಇ ಜರ್ ಚೊ ಜೋಯ ಗಪ್ಕ್ ಬರಾ ಇ ತಾರೀಖಿ ತಾ ಅತ್ ಸರಾ ಇಥಾಬಿತ ಹಾತಿಫ್ ಸಮೂದ ಇಲ್ಬಾ"[24]

ಶ್ರೀರಂಗಪಟ್ಟಣದ 49ನೇ ಶಾಸನ ಸ್ವಾರಸ್ಯವಾಗಿದೆ. ಇದು ಅರ್‍ಯಾಬಿಕ್ ಅಕ್ಷರಗಳಲ್ಲಿದೆ. ಪ್ರವಾದಿ ಮಹಮ್ಮದರ ಮತ್ತು ಇಸ್ಲಾಂ ಧರ್ಮದ ದೇವರ 99 ಬಿರುದುಗಳನ್ನು ತಿಳಿಸುತ್ತದೆ. ಈ ಶಾಸನ ಶ್ರೀರಂಗಪಟ್ಟಣದ ಮಸೀದಿಯ ಪಶ್ಚಿಮ ಗೋಡೆಯ ಮೇಲೆ ಕಂಡುಬರುತ್ತದೆ. ಶಾಸನದ ಪಾಠ ಇಂತಿದೆ. "ಮಹಮ್ಮದ್ ಅಹಮದ್ ಹಾಮಿದ್ ಮಹಮೂದ್ ಖಾಸಿಮ್ ಆಖಿಮ್ ಯುಅಯ್ಯದ್ ಘಾತಿಹ ಬಾತಿಮ್ ಹಾಷೀರ್ ನೂರ್ ಸಿರಾಜ್ ಮುನೀರ್ ಬಷೀರ್ ನಾದೀರ್ ರಸೂಲ್ ನಬೀ ಜವಾದ್ ಕರೀಮ್ ಹಾದ್ ಮಹ್ದ ಮಹ್ದೀ ವಲೀ ಅಬ್ದುಲ್ಲಾ ತಾಹಾ ಯಾಸೀನ್ ಹಾಮೀಮ್ ಮುಜ್ಜಮ್ಮಿಲ್ ಮುದ್ದಥಿರ್ ಕಲೀಮ್ ತಾಹಿರ್ ಮುತಾಹ್ಹಿರ್ ಉಮ್ಮೀ ಮುಖ್ತಾರ್ ಬಾ ಇಮ್ ಹುಜ್ಜತ್ ಬಯಾನ್ ಹಾವೀಜ್ ಷಹೀದ್ ಆದಿಲ್ ಅಮೀರ್ ನಾಹೀ ಮುಬೀನ್ ಬುರ್ಹ್ವಾನ್ ನಾತಿಖ್ ಮದ್ದಕ್ಕಿರ್ ಅಮೀನ್ ಮುಸದ್ದಿಖ್ ಸಾದಿಖ್.

ಮುಸ್ತಫಾ ಮುಜತಬಾ ಮುರ್ತಜಾ ಮೆಕ್ಕಿ ಮದನಿ ಅಬತಾಹೀ ಅರಬೀ ಖುರಷೀ ಅಜೀಜ್ ರೂ ಫರಹೀಮ್ ಹಲೀಮ್ ಹಕೀಮ್ ಅಲೀಮ್ 'ಅಲೀಮ್‌ಮು' ಅಲ್ಲಮ್ ತಯ್ಯಿಬ್ ಮುತಯ್ಯಿಬ್ ಹಬೀಬ್ ರಖೀಬ್ ಖರೀಬ್ ಮುನೀಬ್ ಖತೀಬ್' ಇಮಾಮ್ ಮುನ್ತಖೀ ಘನಿ ಫತ್ತಾಹ್ ಷಕೂರ್ ಮುತೀ ಮುಖಲ್ಲಿಫ ಖಲೀಲ್ ಮಾಹ್ ದಾ ಬರ್ ಷಫೀ ಮುಷಪ್ಪಿ ಷಿಫಾ ರಹಮತ್ ಸಾಬಿಖ್ ಹಬ್ಬ್ ಮತಿನ್ ಅವ್ವಲ್ 'ಆಖಿರ್' ಜಾಹಿರ್ ಬಾತಿನ್ ಲತೀಫ್ ಫಸೀಹ್ ರಷೀದ ಸಬೂರ್.[25]

ಈ ಶಾಸನವು ಶ್ರೀರಂಗಪಟ್ಟಣದ ಮುಸ್ಲಿಂರಲ್ಲಿ ಪ್ರವಾದಿ ಮಹಮ್ಮದರ ಬಗ್ಗೆ ಹಾಗೂ ದೇವರ ಬಗ್ಗೆ ಭಕ್ತಿಯನ್ನುಂಟು ಮಾಡುವ ಸಲುವಾಗಿ ಇದನ್ನು ಕೆತ್ತಲಾಯಿತ್ತೆಂದು ಹೇಳಬಹುದು.

ಶ್ರೀರಂಗಪಟ್ಟಣದ 50ನೇ ನಂಬರ್ ಶಾಸನ ಪ್ರವಾದಿ ಮಹಮ್ಮದರ ಜೀವನ ಚರಿತ್ರೆಯ ಒಂದು ಪ್ರಸಂಗವನ್ನು ದಾಖಲಿಸುತ್ತದೆ. ಇದು ಪರ್ಶಿಯನ್ ಭಾಷೆಯಲ್ಲಿದೆ. ಪವಿತ್ರ ಕುರಾನ್‌ನಿಂದ ಒಂದು ಪದ್ಯವನ್ನು ಇಲ್ಲಿ ಕೊಡಲಾಗಿದೆ. ಪ್ರವಾದಿ ಮಹಮ್ಮದರು ಮದೀನ ನಗರದ ಬಳಿ ಯಹೂದಿಗಳ ವಿರುದ್ಧ ನಡೆಸಿದ ಚತುರೋಪಾಯ ಮತ್ತು ಯುದ್ಧವಾದ ಮೇಲೆ ಗೆದ್ದ ಐಶ್ವರ್ಯಗಳು ಹೇಗೆ ಹಂಚಲಾಯಿತು ಎಂಬುದನ್ನು ತಿಳಿಸುತ್ತದೆ. ಅದರ ಪಾಠ ಇಂತಿದೆ.

"ಬೌಲುಹೂ ತಾ ಅಲಾ ವ ಅಂಜಲಲ್ಲಧೀನ ಜಾಹರೂಹುಮ್ ಮಿನ್ ಅಹಲಿಲ್ ಕಿತಾಬಿ ಮಿನ್ ಸಯಾಸೀ ಹಿಮ್ ವ ಖದಪಫೀ ಖುಲೂಬಿಹಿಮುರ್‍ರು ಬ ಘಾರಿಖಾನ್ ತಖ್ತುಲೂನ.

ವ ತಸಿರೂನ ಘಾರಿಖಾನ್ ವ ಔರಥಕುಮ್ ಅರ್‌ಜಹುಮ್ ವ ದಿಯಾರಹುಮ್ ವ ಅಮ್ ವಾಲಹುಮ್ ವ ಅರ್‌ಜನ್ ಲಮ್ ತತಹಾ ವ ಕನಲ್ಲಾಹು 'ಆಲಾ ಕುಲ್ಲಿ ಷಉನ್ ಖದೀರಾ, ಬ'ದ ಅಜ್ ಸರಾರ್ ಇ ಕುಫ್ಫಾರ್ ಹುಕ್ಮ ಷುದ್‌ಕಿ ಬಹರ್ಜ್ ಇ ಬನಿ ಖುರೈಜಾ ರವನ್ದ ಕಿ ಅಹ್ದ ಷಿಕಸ್ತ ಮದದ್ ಗಾರಿ ಇ ಅಹ್ಜಾಬ್ ನಮೂದನ್ದ ಲಷ್ಕರ್ ಇ ಇಸ್ಲಾಮ್ ಈಷನ್ ರಾ ಷಬಾನ್ ರೋಜ್ ಮುಹಾಸರ ಕರ್ದನ್ದ ವ ಕಾರ್ ಬರ್ ಈಷಾನ್ ತವ್ಗ ಷುದ್ ವ ಬರ್‌ಹುಕ್ಮ ಇ ಸದ್ ಇಬ್ನ ಮ ಆಥ್ ಪುರೂದ ಆಮದನ್ದು ವ ಸದ್‌ಹುಕ್ಮ ಕರ್ದ ಕಿ ಮರ್ದಾನ್ ಇ ಈಷಾನ್ ರಾ ಬುಕುಷನ್ದ ವ ಜನಾನ್ 2 ಕೂದಕಾನ್ ಇ' ಈಷಾನ್ ರಾ ಬುದನ ಗೀರನ್ದ ವ ಅಂವಲ್ ಇ' ಈಷಾನ್ ರಾ ಬರ್ ಮುಸಲ್ಮನಾನ್ ಹಿಸ್ಮತ್ ಕುನನ್ದ ಹಜರತ್ ಇ ರಿಸಾಲತ್ ಸಲಲ್ಲಾಹು ಅಲೈಹಿ ವ ಸಲ್ಲಮ್ ಫರ್‍ಮೂದ ಕಿ ಅಯ್ ಸದ್ ಇ ಮಅಥ್ ಹುಕ್ಮ ಕರ್ದೀ ಕಿ ಖುದಾ ಇತಾ ಆಲಾ ಬರ್ ಬಾಲಾ ಇ ಹಪ್ತ ಅಸ್ಮಾನ್ ಹುಕ್ಮ ಕರ್ದಬೂದ್ ವ ಹಖ್ ಸಭಾನಹು ಅಜೀನ್ ವಾಖಿ ಅಸಖಬರ್ ಮೀ ದಿಹದ್ ವ ಫರ್‍ಮೂದ್ ಪುರೋದ್ ಆವರದ್ ಖುದಾಇ ಆನಾನ್ ರಾಕಿ ಯಾರೀ ದಾದನ್ದ ಆಹ್ಜಾಬ್ ರಾ ವ ಹಮ್ ಪುಷ್ತ ಇ ಈಷಾನ್ ಗಪ್ತಿನ್ನ ಆಜ್ ಅಹ್ಲಿ ತೌರಾತ್ ಯಾಸಿ ಯಹೂದ್ ಇ ಖುರೈಜ ರಾ ಫರೋದ್ ಆವರ್ದ ಅಜ್ ಖಿಲ್ 'ಅಹಾ ಇ ಈಷಾನ್ ವ ಅಫ್ಘಗನ್ದ ದರ್ ದಿಲ್ಲಾ ಇ ಈಷಾನ್ ತರ್‌ಸ್ ಅಜ್ ಪೈಘಂಬರ್ ವ ಲಷ್ಕರ್ ಇ ಊ ಗುರೋಹೀ ರಾಕಿಮಿ ಕುಷ್ತನ್ದ ನುಹಸದ್ ತನ್ ಬುಕಷ್ತನ್ದ ಯಾ ಹಪ್ತ ಸದ್ ತನ್‌ವ ಬುರ್ದ ಮಿ ಗೀರಿದ್ ಗುರೋಹೀ ರಾ ಯಾ ನಿ ಫರ್ಜನ್ದಾನ್ ಒ ಜನಾನ್ ಇ ಜನಾನ್ ಇ ಈಷಾನ್ ರಾ ವ ಮೀರಾಥ್ ದಾದ್ ಷುಮಾ ರಾ ಜಮೀನ್ ಇ ಈಷಾನ್ ಯ'ನೀ ಮಜಾರಿ 'ಒ ಹದಾ' ಇಖ್ ಒ ಸರಾಹಾ ಇ ಈಷಾನ್ ಯಾ'ನೀ. ಹುಸೂನ್ 2 ಖಿಲಾ 2 ಮಾಲ್ದಾ ಇ ಈಫಾನ್ ಅಚ್‌ನುಖೂದ್ 2 ಅಂತಿ ಅರಬ ಮವಾಷೀದ ಅರಾಜೀ ದ ಖ ಷುಮಾದಾದ್ ಜಮೀನ್ ರಾಕಿನ ರಫ್ತ' ಈದ್ ದರ್ ಅನ್ ಯಾ ಮಾಲಿಕ್ ಅನ್ ನ ಬೂದೀದ್ ಮುರಾದ್ ಬೈಬೆರ್ ಅಸ್ತ ಯಾ ದಿಯಾರ್ ಇ ರೂಮ್ ಯಾ ಮಮಾಲಿಕ್ ಇ ಫರಿಸ್ ವ ಗುಪ್ತ ಅನ್ದ ಹರ್ ಜಮೀನ್ ಕಿ ಬ ಹವ್ವ ಇ ಇಸ್ಲಾಮ್ ದರ್, ಆಯುದ್ ತಾ ಖಿಯಾಮತ್ ದರ್' ಈನ್ ದಾಖಿಲ್ ಅಸ್ತವ ಖುದಾ ಇ ಬರ್ ಹಮ ಧೀಜ್ ಖಾದಿರ್ ಒ ತವಾನಾ ಹಸ್ತ."[26]

ಮೇಲಿನ ಶಾಸನದ ಉದ್ದೇಶ ಶ್ರೀರಂಗಪಟ್ಟಣದಲ್ಲಿ ವಾಸವಾಗಿದ್ದ ಮುಸ್ಲಿಂರು ಅಲ್ಲಿನ ಮಸೀದಿಗೆ ಪ್ರಾರ್ಥನೆಗೆ ಬಂದಾಗ ಪ್ರವಾದಿ ಮಹಮ್ಮದ್‌ರ ಸಾಧನೆಗಳು ಅವರಿಗೆ ಯಾವಾಗಲೂ ನೆನಪಿನಲ್ಲಿ ಉಳಿಯಬೇಕೆಂದು ಈ ರೀತಿ ಕೆತ್ತಿಸಿದ್ದರು.

ಹೈದರ್‌ಆಲಿ ಮತ್ತು ಟಿಪ್ಪುಸುಲ್ತಾನರು ಶ್ರೀರಂಗಪಟ್ಟಣದಲ್ಲಿ ವಾಸಿಸುತ್ತಿದ್ದ ಮುಸ್ಲಿಂರ ನಾಯಕರಾಗಿದ್ದರು. ಮುಸ್ಲಿಂರಿಗೆ ಅವರ ಬಗ್ಗೆ ಅತ್ಯಂತ ಪ್ರೀತಿ ವಿಶ್ವಾಸ ಮತ್ತು ಭಕ್ತಿ ಗಾಢ ವಾಗಿದ್ದಿತು. ಈ ಭಾವನೆಗಳು ಶ್ರೀರಂಗಪಟ್ಟಣದ ಗಂಜಾಂನಲ್ಲಿರುವ ಗುಂಬಜ್‌ನಲ್ಲಿ ದೊರೆಯುವ ಶ್ರೀರಂಗಪಟ್ಟಣದ 59 ಮತ್ತು 60ನೇ ಶಾಸನಗಳಲ್ಲಿ ನೋಡಬಹುದು.[27] 59ನೇ ಶಾಸನದಲ್ಲಿ ಪರ್ಶಿಯನ್ ಭಾಷೆಯಲ್ಲಿನ 8 ಪದ್ಯಗಳು ಇವೆ. ಇವುಗಳು ಟಿಪ್ಪುಸುಲ್ತಾನನು ತನ್ನ ತಂದೆಯ ಗೌರವಾರ್ಥ ಕಟ್ಟಿಸಿದ ಸಮಾಧಿಯನ್ನು ಕುರಿತಂತೆ ಪ್ರಶಂಸೆಯನ್ನು ಮಾಡುತ್ತದೆ. ಅದೇ ರೀತಿ 60ನೇ ನಂಬರ್ ಶಾಸನದಲ್ಲಿ 7 ಪರ್ಶಿಯನ್ ಮತ್ತು 2 ಅರ್‍ಯಾಬಿಕ್ ಪದ್ಯಗಳಿದ್ದು ಅವು ಟಿಪ್ಪು ಸುಲ್ತಾನರು ಮೇ 4, 1799 ರಂದು ಹುತಾತ್ಮರಾದ ವಿಷಯವನ್ನು ದಾಖಲಿಸುತ್ತವೆ.

ಗಂಜಾಂ ಶ್ರೀರಂಗಪಟ್ಟಣದ ಒಂದು ಭಾಗವಾಗಿದ್ದು ಇಲ್ಲಿ ಹೆಚ್ಚಾಗಿ ಇಸ್ಲಾಂ ಧರ್ಮದ ಅನುಯಾಯಿಗಳೇ ವಾಸಿಸುತ್ತಿದ್ದರು. ಶ್ರೀರಂಗಪಟ್ಟಣದ 61, 62, 63, 64 ಮತ್ತು 92ನೇ ನಂಬರಿನ ಶಾಸನಗಳು ಇಲ್ಲಿ ದೊರೆಯುವ 18ನೇ ಶತಮಾನದ ಮುಸ್ಲಿಂರ ಗೋರಿಗಳ ಮೇಲಿನ ಅನೇಕ ಶಾಸನಗಳನ್ನು ದಾಖಲಿಸುತ್ತವೆ. ಉದಾ. ಶ್ರೀರಂಗಪಟ್ಟಣದ 64ನೇ ನಂಬರಿನ ಶಾಸನ ಅಕ್ಟೋಬರ್ 25, 1790ರಲ್ಲಿ ಟಿಪ್ಪುಸುಲ್ತಾನರ ಮಗ ನಿಜಾಂ ಅಲ್‌ಉದ್ದಿನ್ ಎಂಬುವವನು ಮರಣ ಹೊಂದಿದ ವಿಷಯವನ್ನು ತಿಳಿಸುತ್ತದೆ. ಅದೇ ರೀತಿ 1793ರ ಶಾಸನವು ಟಿಪ್ಪುಸುಲ್ತಾನರು ಮುಸ್ಲಿಂರಿಗೆ 500 ಚ.ಗ. ವಿಸ್ತೀರ್ಣದ ಭೂಮಿಯನ್ನು ಮುಸ್ಲಿಂರ ಶವಸಂಸ್ಕಾರಕ್ಕಾಗಿ ದಾನಕೊಟ್ಟ ವಿಷಯವನ್ನು ದಾಖಲಿಸುತ್ತದೆ.[28]

ಇಸ್ಲಾಂ ಧರ್ಮಿಯರು ಶ್ರೀರಂಗಪಟ್ಟಣದಲ್ಲಿ ಹಿಂದೂಗಳ ಜೊತೆ ಸೌಹಾರ್ಧ ಭಾವನೆಯಿಂದ ಜೀವಿಸುತ್ತಿದ್ದರು. ಇಂತಹ ಧಾರ್ಮಿಕ ಸಹಬಾಳ್ವೆಗೆ ಶ್ರೀರಂಗಪಟ್ಟಣದ ಒಂದು ಶಾಸನವನ್ನು ಉದಾಹರಿಸಬಹುದು. ಇಲ್ಲಿನ 12ನೇ ನಂಬರ್ ಶಾಸನವು ರಂಗನಾಥಸ್ವಾಮಿ ದೇವಾಲಯದಲ್ಲಿರುವ ದೊಡ್ಡ ಬೆಳ್ಳಿ ಬಟ್ಟಲಿನ ಮೇಲೆ ಕೆತ್ತಲ್ಪಟ್ಟಿದೆ ಅದು ಇಂತಿದೆ. "ಟಿಪ್ಪು ಸುಲ್ತಾನ ಪಾವಾರವರ

ಧರ್ಮ" ಅಂದರೆ ಇದು ಟಿಪ್ಪುಸುಲ್ತಾನರು ರಂಗನಾಥಸ್ವಾಮಿಗೆ ಮಾಡಿದ ದಾನ ಎಂಬ ಅರ್ಥವನ್ನು ಕೊಡುತ್ತದೆ. ಒಟ್ಟಿನಲ್ಲಿ 18ನೇ ಶತಮಾನದಲ್ಲಿ ಶ್ರೀರಂಗಪಟ್ಟಣದಲ್ಲಿ ಇಸ್ಲಾಂ ಧರ್ಮ ಪ್ರಗತಿಯನ್ನು ಸಾಧಿಸಿತು.

## ಕ್ರೈಸ್ತಧರ್ಮ

ಶ್ರೀರಂಗಪಟ್ಟಣದಲ್ಲಿ ಕ್ರೈಸ್ತ ಧರ್ಮವು ಕಾಲಿಟ್ಟಿತು. ಶ್ರೀರಂಗಪಟ್ಟಣಕ್ಕೆ 17ನೇ ಶತಮಾನದಲ್ಲಿ ಸಿನ್ನಾಮಿ ಎಂಬ ಕ್ರೈಸ್ತ ಪಾದ್ರಿಯು ಬಂದು ಕಂಠೀರವ ನರಸರಾಜ ಒಡೆಯರನ್ನು ಬೇಟಿಮಾಡಿ ತಾನು ಅಲ್ಲಿ ಇರುವ ಆಶೆಯನ್ನು ವ್ಯಕ್ತಪಡಿಸಿದನು. ಕಂಠೀರವನು ಇದಕ್ಕೆ ಒಪ್ಪಿಗೆ ನೀಡಿ ಗಂಜಾಂನಲ್ಲಿ ಅದಕ್ಕೆ ತಕ್ಕ ಏರ್ಪಾಡನ್ನು ಮಾಡಿದನು. ಸಿನ್ನಾಮಿ ಶ್ರೀರಂಗಪಟ್ಟಣದ ಆವರಣದಲ್ಲಿ ನೆಲೆಯೂರಿದ ಮೇಲೆ ವೈದಿಕ ಮತದ ಲಕ್ಷಣಗಳನ್ನು ಅಧ್ಯಯನ ಮಾಡಿದುದಲ್ಲದೆ ಕ್ರೈಸ್ತ ಮತ ಪ್ರಚಾರ ಮಾಡಲು ಪ್ರಾರಂಭಿಸಿದನು.[29] ಆತನ ಮತ್ತು ಆತನು ನೀಡಿರುವ ಕೆಲವು ವಿವರಗಳನ್ನು ಇಲ್ಲಿ ವಿವರಿಸಬಹುದಾಗಿದೆ.

ಸಿನ್ನಾಮಿಯು ಕ್ರಿ.ಶ. 1609ರಲ್ಲಿ ಇಟಲಿಯಲ್ಲಿ ಹುಟ್ಟಿ ಬೆಳೆದವನಾಗಿದ್ದು ಕ್ರಿ.ಶ. 1623ರಲ್ಲಿ ನೇಪಾಲ್ಸ್‌ನಲ್ಲಿದ್ದ ಜೀಸಸ್ ಸಂಘವನ್ನು ಸೇರಿದನು. 1643ನೇ ಜನವರಿ ತಿಂಗಳಿನಲ್ಲಿ ಭಾರತ ದೇಶಕ್ಕೆ ಆಗಮಿಸಿದನು. ಗೋವಾದಲ್ಲಿ ಸ್ವಲ್ಪ ಕಾಲವಿದ್ದು ನಂತರ ಉತ್ತರ ಕನ್ನಡ ಜಿಲ್ಲೆಗೆ ಬಂದು ತನ್ನ ಸಂಘದ ಪ್ರಚಾರ ಕಾರ್ಯವನ್ನು ಆರಂಭಿಸಿದನು. ಸಿನ್ನಾಮಿ ಕನ್ನಡ ಪ್ರದೇಶದಲ್ಲೆಲ್ಲಾ ಪ್ರವಾಸ ಮಾಡಿ ಕ್ರಿ.ಶ. 1648ರಲ್ಲಿ ಮೈಸೂರಿನ ರಾಜಧಾನಿಯಾದ ಶ್ರೀರಂಗಪಟ್ಟಣವನ್ನು ಪ್ರವೇಶಿಸಿದನು. ಅವನು ಕಂಡ ಶ್ರೀರಂಗಪಟ್ಟಣದ ವರ್ಣನೆಯನ್ನು ಮಾಡುತ್ತಾ "ಶ್ರೀರಂಗಪಟ್ಟಣ ಭವ್ಯವಾದ ನಗರ, ಅದು ಮೂರು ಗೋಡೆಗಳಿಮದಲೂ ಮತ್ತು ಮೂರು ಕಂದಕಗಳಿಂದಲೂ ಸುತ್ತುವರಿಯಲ್ಪಟ್ಟಿದೆ. ಇದು ಭವ್ಯವಾದ ಸೌಧಗಳಿಂದಲೂ ಹಾಗೂ ರಮಣೀಯವಾದ ಅರಮನೆಗಳಿಂದಲೂ ಶೋಭಿಸುತ್ತಿದೆ. ಸ್ವಲ್ಪ ದೂರದಿಂದ ನೋಡಿದರೆ ಕಾಣುವ ಗೋಪುರಗಳು, ಕಲಾವಸ್ತು, ಪ್ರದರ್ಶನಾಲಯ ಮತ್ತು ವಿಸ್ಮಯಕರವಾದ ವಸ್ತುಗಳು ಯೂರೋಪಿಯನ್ನರಿಂದ ನಿರ್ಮಾಣವಾದುದೇ ಎಂಬಂತೆ ತೋರುತ್ತದೆ."

ನಾನು ಅಗ್ರಹಾರದಲ್ಲಿ ಇಳಿದುಕೊಂಡೆ, ಅದು ನಮ್ಮ ಮಠವನ್ನು ಹೋಲುತ್ತದೆ, ರಸ್ತೆಗಳು ಉದ್ದವಾಗಿಯೂ ಮತ್ತು ಶುಭ್ರವಾಗಿಯೂ ಇವೆ ಇಕ್ಕೆಲಗಳಲ್ಲಿ ಮನೆಗಳಿವೆ, ಮನೆಗಳಲ್ಲಿ ಎಲ್ಲಾ

ಅನುಕೂಲತೆಗಳು ಇವೆ. ಬ್ರಾಹ್ಮಣ ಅತಿಥಿಗಳು ಇಳಿದುಕೊಳ್ಳುವುದಕ್ಕೆ ವಿಶಾಲವಾದ ಅಂಗಳಗಳಿವೆ. ಈ ಅಂಗಳಗಳಲ್ಲಿ ಇದ್ದುಕೊಂಡು ಅವರು ಇಡೀ ದಿನವನ್ನು ಓದುತ್ತಲೂ, ಬರೆಯುತ್ತಲೂ, ಮುಖ್ಯವಾದ ವಿಷಯಗಳನ್ನು ಪ್ರಸ್ತಾಪಿಸುತ್ತಲೂ ಕಳೆಯುತ್ತಾರೆ. ಏಕೆಂದರೆ ಅವರೆಲ್ಲರೂ ಓದು ಬರಹವನ್ನು ಬಲ್ಲವರು. ರಾಜನು ಅವರಿಗೆ ಸಾಕಷ್ಟು ಹಣವನ್ನು ಕೊಡುತ್ತಾನೆ. ಆದ್ದರಿಂದ ಅವರಿಗೆ ಕಷ್ಟಗಳಿಲ್ಲ. ಅಗ್ರಹಾರದ ಒಂದು ಪಕ್ಕದಲ್ಲಿ ಕಾವೇರಿ ನದಿ ಹರಿಯುತ್ತಿದೆ. ಎಲ್ಲರೂ ಅದರಲ್ಲಿ ಸ್ನಾನ ಮಾಡುತ್ತಾರೆ. ಅದರಿಂದ ಅವರ ಪ್ರಕಾರ ಅವರು ಪ್ರಾಚೀನ ಕರ್ಮದಿಂದ ವಿಮುಕ್ತರಾಗಿ ಬ್ರಹ್ಮಾನಂದವನ್ನು ಪಡೆಯುತ್ತಾರೆ. ಅದರ ಇನ್ನೊಂದು ಪಕ್ಕದಲ್ಲಿ ಸಣ್ಣ ನದಿಯೊಂದು (ಕಾವೇರಿಯ ಒಂದು ಭಾಗ) ಹರಿಯುತ್ತದೆ. ದೂರ ದೇಶಗಳಿಂದ ಬಂದವರು ಅಲ್ಲಿ ಸ್ನಾನಮಾಡಿ ದಡಗಳ ಮೇಲೆ ಕುಳಿತು ಧ್ಯಾನವನ್ನೋ ಅಥವಾ ಪೂಜೆಯನ್ನೋ ಮಾಡುತ್ತಿರುತ್ತಾರೆ.

ಸಿನ್ನಾಮಿಯು ಮೈಸೂರು ರಾಜನಾದ ಕಂಠೀರವ ನರಸರಾಜ ಒಡೆಯನ ಬಗ್ಗೆ ಈ ರೀತಿ ಬರೆಯುತ್ತಾನೆ. "ಈಗ ಆಳುತ್ತಿರುವ ರಾಜ ಚಿಕ್ಕವನಿದ್ದಾಗ ತನ್ನ ತಂದೆಯ ಜೊತೆ ಜಗಳವಾಡುತ್ತಿದ್ದನು. ಮನೆ ಬಿಟ್ಟು ಓಡಿಹೋಗಿ ವೇಷ ಮರೆಸಿಕೊಂಡು ಅನೇಕ ದೇಶಗಳನ್ನು ಸುತ್ತಿದನು. ಪ್ರಭಾವಶಾಲಿಯೂ ಹಾಗೂ ಒಳ್ಳೆಯ ತಿಳುವಳಿಕೆಯುಳ್ಳವನೂ ಆಗಿದ್ದುದರಿಂದ ರಾಜ್ಯಾಡಳಿತವನ್ನು ಅಭ್ಯಾಸ ಮಾಡಿ ಅನುಭವ ಪಡೆದಿದ್ದನು. ತಂದೆ ಮರಣ ಹೊಂದಿದ ಮೇಲೆ ಮನೆಗೆ ಹಿಂದಿರುಗಿದನು. ತನ್ನ ಸೈನಿಕರಿಗೆ ಒಳ್ಳೆಯ ಶಿಕ್ಷಣವನ್ನು ಕೊಟ್ಟನು". ಸಿನ್ನಾಮಿಯು ಮೈಸೂರಿನ ರಾಜನಾದ ಕಂಠೀರವ ನರಸರಾಜನನ್ನು ಹೊಗಳುತ್ತಾ "ರಾಜನು ಹಿಂಸೆ, ಅನ್ಯಾಯ ಹಾಗೂ ಮೋಸ ಕೃತ್ಯಗಳ ಶತ್ರು ಯಾವ ಪಂಡಿತನಾಗಲಿ ರಾಜನ ಮುಂದೆ ಬರುತ್ತಿರಲಿಲ್ಲ. ಒಂದು ದಿನ ಸಿನ್ನಾಮಿ ಕಂಠೀರವ ಸರಸರಾಜನ ಅರಮನೆಗೆ ಹೋಗುವಾಗ ಬರಿಯ ಕೈಯಲ್ಲಿ ಹೋಗಬಾರದೆಂದು ಒಂದು ಖಡ್ಗವನ್ನು ಹಾಗೂ ಇತರ ಬಹುಮಾನಗಳನ್ನೂ ತೆಗೆದುಕೊಂಡು ಹೋದನು. ಸಂಸ್ಕೃತ ಭಾಷೆಯಲ್ಲಿ ರಾಜನು ಅವನನ್ನು ಸ್ವಾಗತಿಸಿದನು. ಆದರೆ ಸಿನ್ನಾಮಿ ತನ್ನ ಮಾತೃಭಾಷೆಯಲ್ಲಿಯೇ ಕಂಠೀರವನನ್ನು ಹೊಗಳಿದನು. ಏನಾದರೂ ಮಾತಿದ್ದರೆ ಹೇಳಬಹುದೆಂದು ರಾಜನು ಸನ್ಯಾಸಿಗೆ ಅವಕಾಶ ಕೊಟ್ಟನು. ಸತ್ಯ ಪ್ರಚಾರಕ್ಕಾಗಿ ತಾನು ಬಂದಿರುವನೆಂದೂ ಇಷ್ಟ ಉಳ್ಳವರು ಈ ಮತವನ್ನು (ಕ್ರೈಸ್ತಮತ) ಅನುಸರಿಸಬಹುದೆಂದು ರಾಜನಿಗೆ ಹೇಳಿದನು. ತಾನು ಬೋಧಿಸಿದುದನ್ನು ಎಲ್ಲರೂ ಒಪ್ಪಿಕೊಳ್ಳಬೇಕೆಂದು ಯಾರನ್ನು ಅವನು ಬಲಾತ್ಕರಿಸಲಿಲ್ಲ. ತಾನೂ ಮತ್ತು ತನ್ನ ಮಿತ್ರರು ಮತ ಪ್ರಚಾರ ಮಡಲು ಅವಕಾಶ ಕೊಡಬೇಕೆಂದು ಕೇಳಿಕೊಂಡನು. ರಾಜನು ಅದಕ್ಕೆ ಸಮ್ಮತಿ ನೀಡಿದನು. ರಾಜನು

ಈ ಸನ್ಯಾಸಿಗೆ ಒಂದು ಮನೆ ಜೀವನೋಪಾಯಕ್ಕೆ ಒಂದು ಹಳ್ಳಿಯನ್ನು ದಾನವಾಗಿ ಕೊಟ್ಟನು. ಸತ್ಯ ಮಂಗಲದಲ್ಲಿ ಒಂದು ದೊಡ್ಡ ಕ್ರಿಶ್ಚಿಯನ್ ಕುಟುಂಬವಿತ್ತು. ಈ ಕುಟುಂಬಕ್ಕೆ ಹಿಂದೂಗಳು ತೊಂದರೆ ಕೊಟ್ಟು ಅವರ ಆಸ್ತಿಪಾಸ್ತಿಗಳನ್ನು ವಶಪಡಿಸಿಕೊಂಡಿದ್ದರು. ಕ್ರಿಶ್ಚಿಯನ್ ನಾಯಕನಾದ ಫಾದರ್ ಮಾರ್ಟಿನನು ಸಿನ್ನಾಮಿಯ ಸಹಾಯದಿಂದ ರಾಜನ ಆಸ್ಥಾನಕ್ಕೆ ಹೋಗಿ ಕ್ರಿಶ್ಚಿಯನ್ನರಿಗೆ ಯಾವ ತೊಂದರೆಯೂ ಆಗದಂತೆ ಕಟ್ಟಾಜ್ಞೆಯನ್ನು ಮಾಡಿಸಿಕೊಂಡನು.

ರಾಜ್ಯದಲ್ಲಿ ತಿಮ್ಮರಸಯ್ಯ ಬಹು ಪ್ರಭಾವಶಾಲಿ. ರಾಜ್ಯದ ಕೆಲಸ ಕಾರ್ಯಗಳು ಜಾಸ್ತಿ ಇದ್ದುದರಿಂದ ರಾಜನು ಮಂತ್ರಿ ತಿಮ್ಮರಸಯ್ಯನನ್ನು ಕರೆದು ಸಿನ್ನಾಮಿಗೆ ಒಂದು ಮನೆಯನ್ನು ಹಾಗೂ ಅವನ ಮತ ಪ್ರಚಾರಕ್ಕೆ ಒಂದು ನಿರೂಪವನ್ನೂ ಕೊಡುವಂತೆ ತಿಳಿಸಿದನು. ಕ್ರಿಸ್ತನ ತತ್ವ ವನ್ನು ಕೇಳಲು ತನಗೆ ತುಂಬಾ ಆಸಕ್ತಿ ಇರುವುದರಿಂದ ಸಿನ್ನಾಮಿಯು ಬಂದು ತನ್ನ ಜೊತೆಯಲ್ಲಿ ಮಾತನ್ನಾಡುವಂತೆ ಹೇಳಿ ಕಳುಹಿಸಿದನು. ಸಿನ್ನಾಮಿಯು ತಿಮ್ಮರಸಯ್ಯನನ್ನು ಬೇಟಿ ಮಾಡಿದನು. ಆದರೆ ಬಳುವಳಿಯಾಗಿ ಅವನಿಗೆ ಏನನ್ನೂ ತೆಗೆದುಕೊಂಡು ಹೋಗಿರಲಿಲ್ಲ. ಏಕೋ ಏನೋ ಆ ಪದ್ಧತಿಯನ್ನು ಸಿನ್ನಾಮಿಯು ಮರೆತಿದ್ದನು. ತಿಮ್ಮರಸಯ್ಯ ಅವನಿಗೆ ಮನೆಯನ್ನು ಕೊಡಲಿಲ್ಲ ಅಥವಾ ಮತ ಪ್ರಚಾರಕ್ಕೆ ಅಪ್ಪಣೆಯನ್ನು ಕೊಡಲಿಲ್ಲ. ಅಲ್ಲದೆ ಸಿನ್ನಾಮಿಯು ರಾಜನನ್ನು ನೋಡದಂತೆ ಇಲ್ಲಸಲ್ಲದ ನೆಪಗಳನ್ನು ಹೂಡಿದ. ಶತ್ರುಗಳ ದಾಳಿಯಿಂದ ನೆಲಸಮವಾಗಿದ್ದ ಚರ್ಚನ್ನು ಜೀರ್ಣೋದ್ಧಾರ ಮಾಡಿಸಬೇಕೆಂಬ ಉದ್ದೇಶದಿಂದ ರಾಜನನ್ನು ಭೇಟಿ ಮಾಡಲು ಸಮಯ ಕಾಯುತ್ತಿದ್ದನು. ಆದರೆ ತಿಮ್ಮರಸಯ್ಯನು ರಾಜನನ್ನು ನೋಡಲು ಸಿನ್ನಾಮಿಗೆ ಅವಕಾಶ ಕೊಡಲಿಲ್ಲ. ತಿಮ್ಮರಸಯ್ಯ ಸಿನ್ನಾಮಿಯನ್ನು ಕುರಿತು ಈ ರೀತಿ ಹೇಳಿದನು. ಕಾಲ ತುಂಬಾ ಕೆಟ್ಟಿದೆ. ಈ ಧರೆಯ ಮೇಲೆ ರಾಜನು ನಮಗೆ ರಕ್ಷಣೆ ಕೊಡಬೇಕೆಂದು ನೀವೇಕೆ ಕೇಳಬೇಕು? ಯಾರು ನಿಮ್ಮ ಹಿಂಸಿಸುತ್ತಾರೆ. ಒಂದು ಸಣ್ಣ ಗುಡಿಸಲು ಸಾಕಾಗುವ ಮನುಷ್ಯನಿಗೆ ಒಂದು ದೊಡ್ಡ ಮನೆ ಏಕೆ ಬೇಕು? ಆದ್ದರಿಂದ ನೀವು ಏನು ಮಾಡಬೇಕೆಂದಿರುವಿರಿ? ಪ್ರಚಾರಕ್ಕೆ ಅವಕಾಶ ಕೊಡಬೇಕು. ಅಶುಭವಾದುದನ್ನು ಮುಚ್ಚಿಡುವುದಕ್ಕಲ್ಲದೆ, ಭೂಗತ ಚಟುವಟಿಕೆಗಳನ್ನು ಮಾಡುವುದಕ್ಕಲ್ಲದೆ ಬೇರೆ ಏನು? ರಾಜನ ರಕ್ಷಾ ಕವಚವನ್ನು ಯಾಚಿಸುತ್ತಿರುವುದು ನಾವು ಯಾವ ದೇವರುಗಳನ್ನು ಪೂಜಿಸುತ್ತೇವೆಯೋ ಅವುಗಳನ್ನು ಅವಹೇಳನೆ ಮಾಡುವುದಕ್ಕೆ ಎಂಬುದು ನನಗೆ ಚೆನ್ನಾಗಿ ಗೊತ್ತು. ನೀವು ಕೇಳುವ ವಿಶೇಷವಾದ ಹಕ್ಕು ಈ ರಾಜ್ಯದಲ್ಲಿ ನೀವು ಸುಖವಾಗಿರುವುದಕ್ಕಾದರೆ ಅದನ್ನೇಕೆ ನಿಮಗೆ ನಾವು ಕೊಡಬಾರದು? ಮನೆಯಲ್ಲಿರಿ, ಯಾರಿಗೂ ತೊಂದರೆ ಕೊಡಬೇಡಿ, ಯಾರು ನಿಮಗೆ

ತೊಂದರೆ ಕೊಡುವುದಿಲ್ಲ. ನೀವು ಸನ್ಯಾಸಿಗಳಾದರೆ ಧ್ಯಾನ ಮಾಡಿ, ರಾಜ್ಯದ ಸುಖಶಾಂತಿಯನ್ನು ಕಲಕಬೇಡಿ, ನಮ್ಮ ಮತಾಚಾರಗಳನ್ನು ನಿಂದಿಸಬೇಡಿ; ನಮ್ಮ ದೇವರುಗಳೆಲ್ಲ ಸುಳ್ಳೆಂದು ಹೇಳಬೇಡಿ. ಇದು ಮತವನ್ನು ಆಳು ಮಾಡುವುದಲ್ಲದೆ ಬೇರೆಯಾದರೂ ಏನು? ಹೀಗೆ ತಿಮ್ಮರಸಯ್ಯನು ಹೇಳಿ ರಾಜನಿಂದ ಆಗಲೇ ಪಡೆದಿದ್ದ ವಿಶೇಷವಾದ ಹಕ್ಕುಗಳನ್ನು ಸಿನ್ನಾಮಿಯಿಂದ ಕಿತ್ತುಕೊಂಡನು. ಎಲ್ಲಾ ಕ್ರೈಸ್ತ ಪಾದ್ರಿಗಳನ್ನು ರಾಜ್ಯದಿಂದ ಓಡಿಸಬೇಕೆಂದು ತಿಮ್ಮರಸಯ್ಯನು ಮನಸ್ಸು ಮಾಡಿದ್ದರೂ ತಿಮ್ಮರಸಯ್ಯನ ನಂತರ ಬಂದ ಮಂತ್ರಿಯು ಸಿನ್ನಾಮಿಯನ್ನು ಗೌರವದಿಂದ ಕಂಡು ಮೈಸೂರು ರಾಜ್ಯದಲ್ಲಿ ತನ್ನ ಮತ ಪ್ರಚಾರಕ್ಕೆ ಏನೇನು ಅನುಕೂಲತೆಗಳು ಬೇಕೋ ಅವೆಲ್ಲವನ್ನೂ ಒದಗಿಸಿಕೊಟ್ಟನು.[30] ಒಟ್ಟಿನಲ್ಲಿ ಸಿನ್ನಾಮಿಯು ಶ್ರೀರಂಗಪಟ್ಟಣವನ್ನು ಮುಖ್ಯ ಕೇಂದ್ರವನ್ನಾಗಿ ಮಾಡಿಕೊಂಡು ಮೈಸೂರು ರಾಜ್ಯದಲ್ಲಿ ಕ್ರೈಸ್ತ ಪ್ರಚಾರವನ್ನು ಆರಂಭಿಸಿದನು. ಕಂಠೀರವನು ಅವನಿಗೆ ಆಶ್ರಯವಿತ್ತನು.

ಕಳಲೆ ನಂಜರಾಜ, ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲಿ ಶ್ರೀರಂಗಪಟ್ಟಣ ಪ್ರದೇಶದಲ್ಲಿ ವಿದೇಶೀ ಕ್ರೈಸ್ತರು ಆಗಮಿಸಿ ಇಲ್ಲಿ ಬೇರೆ ಬೇರೆ ಉದ್ದೇಶಗಳಿಗಾಗಿ ನೆಲೆಸಿದ್ದರೆಂದು ದಾಖಲೆಗಳಿಂದ ಗೊತ್ತಾಗುತ್ತದೆ. ಯೂರೋಪಿಯನ್ ಕ್ರೈಸ್ತರೂ ಇಲ್ಲಿಗೆ ಬಂದರು. ಅವರಲ್ಲಿ ಫ್ರೆಂಚರು ಮೊದಲು ಪ್ರಭಾವಶಾಲಿಗಳಾಗಿದ್ದರು. ಟಿಪ್ಪುವಿನ ಕಾಲದಲ್ಲಿ ಫ್ರೆಂಚರು ಇಲ್ಲಿ ಸಲಹೆಗಾರರಾಗಿ ನೆಲೆಸಿದ್ದರು. ಮುಂದೆ ಬ್ರಿಟಿಷರು ಸ್ವಲ್ಪ ಕಾಲ ನೆಲೆಸಿದ್ದರು. ಆದರೆ ದೇಶೀಯ ಕ್ರೈಸ್ತ ಜನ ಇಲ್ಲಿ ಹೆಚ್ಚು ಸಂಖ್ಯೆಯಲ್ಲಿ ನೆಲಸಲಿಲ್ಲ. ಅವರು ಮೈಸೂರು ಮತ್ತು ಬೆಂಗಳೂರುಗಳಲ್ಲಿ ಕಾಣಿಸಿಕೊಂಡರು. ರಾಜಧಾನಿಯಾಗಿ ಶ್ರೀರಂಗಪಟ್ಟಣದ ಅವನತಿ ಮತ್ತು ದಟ್ಟವಾದ ಹಿಂದೂಧರ್ಮದ ಪರಿಸರ ಈ ಸ್ಥಿತಿಗೆ ಕಾರಣವೆಂದು ಹೇಳಬಹುದು.

ಒಟ್ಟಿನಲ್ಲಿ ಧಾರ್ಮಿಕ ದೃಷ್ಟಿಯಿಂದ ಶ್ರೀರಂಗಪಟ್ಟಣವು ಪ್ರಧಾನವಾಗಿ ಶ್ರೀ ವೈಷ್ಣವ ನೆಲೆಯಾಗಿ ಬೆಳೆದು ಪ್ರಗತಿ ಹೊಂದಿತು. ಶೈವ ಮತ್ತು ಜಾನಪದ ಧರ್ಮದ ಕುರುಹುಗಳೂ ಸಾಕಷ್ಟು ಇಲ್ಲಿ ದೊರೆಯುತ್ತದೆ. ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳು ಶ್ರೀರಂಗಪಟ್ಟಣದೊಡನೆ ತಮ್ಮ ಸಂಬಂಧಗಳನ್ನು ಕಲ್ಪಿಸಿಕೊಂಡವು. ಸಿನ್ನಾಮಿ ಮತ್ತು ಬುಕ್ಯಾನನ್ ಎಂಬ ಪಾಶ್ಚಿಮಾತ್ಯ ಕ್ರೈಸ್ತರು ಶ್ರೀರಂಗಪಟ್ಟಣವನ್ನು ಸಂದರ್ಶಿಸಿದರು. ಒಟ್ಟಿನಲ್ಲಿ ಶ್ರೀರಂಗಪಟ್ಟಣವು ಧಾರ್ಮಿಕ ವೈವಿಧ್ಯತೆಯ ನೆಲೆಯಾಯಿತು. ಇದಲ್ಲದೆ ಧಾರ್ಮಿಕ ಸಹಿಷ್ಣುತೆ ಇಲ್ಲಿನ ಜನಜೀವನದ ಒಂದು ಮುಖ್ಯವಾದ ಮೌಲ್ಯವಾಯಿತು.

# ಅಡಿಟಿಪ್ಪಣಿಗಳು

1) ಎ.ಕ.6 (ಎನ್.ಎಸ್) ಶ್ರೀ ಪ.1 ಕ್ರಿ.ಶ. 1210.

2) ಅದೇ, ಶ್ರೀ ಪ.7 ಕ್ರಿ.ಶ. 1431

3) ಅದೇ ಶ್ರೀ ಪ.71, ಕ್ರಿ.ಶ. 1598

4) ಕೆ.ಎಸ್.ನಂಜುಂಡಪ್ಪ – ಚಿಕ್ಕದೇವರಾಜ ಒಡೆಯರು ಮತ್ತು ವೈಷ್ಣವ ಧರ್ಮ, ಮಾನವಿಕ ಕರ್ನಾಟಕ, ಸಂ.1, ಸಂಚಿಕೆ–1, ಮೈಸೂರು 1990, ಪುಟ 134.

5) ಅದೇ, ಪುಟ 135

6) ಎ.ಕ.6 (ಎನ್.ಎಸ್) ಶ್ರೀ ಪ.5, ಕ್ರಿ.ಶ. 1564

7) ಅದೇ ಶ್ರೀ ಪ. 9, 17ನೇ ಶತಮಾನ

8) ಅದೇ ಶ್ರೀ ಪ.2, ಕ್ರಿ.ಶ. 1528

9) ಅದೇ ಶ್ರೀ ಪ.3, ಕ್ರಿ.ಶ. 1431

10) ಅದೇ ಶ್ರೀ ಪ.6, ಕ್ರಿ.ಶ. 1571

11) ಅದೇ ಶ್ರೀ ಪ.8, ಕ್ರಿ.ಶ. 1528

12) ಅದೇ ಶ್ರೀ ಪ.19 ಕ್ರಿ.ಶ. 1800

13) ಅದೇ ಶ್ರೀ ಪ.23 ಕ್ರಿ.ಶ. 1664

14) ಕಂ.ನ.ವಿ. ಸಂಧಿ 7 ಸ.73–114

15) ಅದೇ

16) ಎ.ಕ.6 (ಎನ್.ಎಸ್) ಶ್ರೀ ಪ.43

17) ಅದೇ ಶ್ರೀ ಪ.28 18ನೇ ಶತಮಾನ

18) ಅದೇ ಶ್ರೀ ಪ.27 ಮತ್ತು 30, 17–18ನೇ ಶತಮಾನ

19) ಅದೇ ಶ್ರೀ ಪ.38, ಕ್ರಿ.ಶ. 1666

20) ಅದೇ ಶ್ರೀ ಪ.44 ಕ್ರಿ.ಶ. 1862

21) ಅದೇ ಶ್ರೀ ಪ.39, ಕ್ರಿ.ಶ. 1864

22) ಅದೇ ಶ್ರೀ ಪ.45, 18–19ನೇ ಶತಮಾನ

23) ಅದೇ ಶ್ರೀ ಪ.47

24) ಅದೇ ಶ್ರೀ ಪ.48, 1215–1782ನೇ ಶತಮಾನ

25) ಅದೇ ಶ್ರೀ ಪ.49

26) ಅದೇ ಶ್ರೀ ಪ.50

27) ಅದೇ ಶ್ರೀ ಪ.59, 1782, ಶ್ರೀ ಪ.60, 1799

28) ಅದೇ ಶ್ರೀ ಪ.92

29) ಬಿ.ಮುದ್ದಾಚಾರಿ – ಸಿಸ್ನಾಮಿ ಕಂಡ ಮೈಸೂರು (ಪ್ರಬುದ್ಧ ಕರ್ನಾಟಕ)

30) ಅದೇ ಪುಟ 70–77

# ಅಧ್ಯಾಯ 5
# ಉಪಸಂಹಾರ

ಇಲ್ಲಿಯವರೆಗಿನ ಅಧ್ಯಯನದಿಂದ ಒಟ್ಟಾರೆ ಮೂಡುವ ಕೆಲವು ಸಾಮಾನ್ಯ ತೀರ್ಮಾನಗಳನ್ನು ಇಲ್ಲಿ ನಿರೂಪಿಸಬಹುದು. ಕರ್ನಾಟಕದ ಇತಿಹಾಸದಲ್ಲಿ ಶ್ರೀರಂಗಪಟ್ಟಣ ತನ್ನದೇ ಆದ ಮೌಲ್ಯವನ್ನು ಬೆಳೆಸಿಕೊಂಡಿದೆ. ಶ್ರೀರಂಗಪಟ್ಟಣದಲ್ಲಿ ಒಂದು ಸುವ್ಯವಸ್ಥಿತ ರಾಜಕೀಯ ಸ್ಥಿರತೆಯನ್ನು ಇಲ್ಲಿನ ಆಳುವ ವರ್ಗ ರೂಪಿಸಿ, ಆ ಮೂಲಕ ತನ್ನೊಳಗೆ ಹುದುಗಿಸಿಕೊಂಡಿದ್ದ ಸಂಮೃದ್ಧವಾದ ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ನೆಲೆಗಟ್ಟುಗಳ ಮೌಲ್ಯಗಳನ್ನು ಎತ್ತಿಹಿಡಿದು ಶ್ರೀರಂಗಪಟ್ಟಣದ ಇತಿಹಾಸದಲ್ಲಿ ಸಮನ್ವಯಗೊಳಿಸಿದೆ. ಇದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಒಂದನೆಯದಾಗಿ, ವಿಜಯನಗರ ಕಾಲದಿಂದಲೂ ಶ್ರೀರಂಗಪಟ್ಟಣವು ಆರ್ಥಿಕ ನೆಲೆಗಟ್ಟಾಗಿ ರೂಪುಗೊಂಡಿತು. ಒಡೆಯರ ಕಾಲದಲ್ಲಿ ಅದರಲ್ಲೂ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಶ್ರೀರಂಗಪಟ್ಟಣ ಸಾಕಷ್ಟು ಅಭಿವೃದ್ಧಿಯನ್ನು ಸಾಧಿಸಿತು. ಕಳಲೆ ಮನೆತನದ ದಳವಾಯಿಗಳಾದ ದೇವರಾಜಯ್ಯ ಮತ್ತು ನಂಜರಾಜಯ್ಯರವರು ಇಲ್ಲಿನ ಆರ್ಥಿಕ ಸಂಪತ್ತನ್ನು ರೂಢಿಸಿದ್ದರು. ಆದರೆ ಕಳಲೆ ನಂಜರಾಜನು ತಿರುಚನಾಪಳ್ಳಿಯ ಸಾಹಸದಿಂದ ಶ್ರೀರಂಗಪಟ್ಟಣದ ಖಜಾನೆ ಬರಿದಾದಾಗ ಹೈದರಾಲಿ ಅಲ್ಲಿನ ಆರ್ಥಿಕ ದುಸ್ಥಿತಿಯನ್ನು ಬಳಸಿಕೊಂಡು ಅಧಿಕಾರಕ್ಕೆ ಬಂದನು. ಅವನು ಮತ್ತು ಅವನ ಮಗ ಟಿಪ್ಪುಸುಲ್ತಾನನು ಶ್ರೀರಂಗಪಟ್ಟಣದ ಆರ್ಥಿಕ ಪರಿಸ್ಥಿತಿಯನ್ನು ವೈವಿದ್ಯಮಯವಾಗಿ ರೂಪಿಸಿದರೂ ಟಿಪ್ಪುಸುಲ್ತಾನನಂತು 3ನೇ ಆಂಗ್ಲೋ ಮೈಸೂರು ಯುದ್ಧಾ ನಂತರದ ರಾಜಕೀಯ ಬದಲಾವಣೆಯಲ್ಲಿ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವಲ್ಲಿ ಶ್ರೀರಂಗಪಟ್ಟಣ ವಲಯದಲ್ಲಿ ಶಸ್ತ್ರಾಸ್ತ್ರಗಳನ್ನು ತಯಾರಿಸುವ ಕಾರ್ಖಾನೆ, ಬಟ್ಟೆ ಕಾರ್ಖಾನೆ, ರೇಷ್ಮೆ ಕೈಗಾರಿಕೆ, ಕಾಗದದ ಕಾರ್ಖಾನೆ ಮತ್ತು ಸಕ್ಕರೆ ಕಾರ್ಖಾನೆಗಳು ತಲೆ ಎತ್ತಿ ಆರ್ಥಿಕ ವ್ಯವಸ್ಥೆಯನ್ನು ವೈವಿಧ್ಯಮಯವಾಗಿ ರೂಪಿಸಿ ಆರ್ಥಿಕ ಪ್ರಗತಿಗೆ ನಾಂದಿಯಾದನು. ಆದರೆ ಕ್ರಿ.ಶ. 1800ರ ನಂತರ ಆರ್ಥಿಕ ದೃಷ್ಟಿಯಿಂದ ಹೇಳುವುದಾದರೆ ಶ್ರೀರಂಗ ಪಟ್ಟಣ ಅವನತಿಯ ಹಾದಿಯನ್ನು ಹಿಡಿಯಿತ್ತೆನ್ನಬಹುದು.

ಇಲ್ಲಿನ ಭೂಮಿ ಫಲವತ್ತಾಗಿದ್ದುದರಿಂದ ಕೃಷಿ ವ್ಯವಸ್ಥೆಯು ವೈವಿಧ್ಯಮಯವಾಗಿತ್ತು. ನೀರಾವರಿ ಹಾಗೂ ಒಣಬೇಸಾಯ ಎರಡೂ ಸಾಕಷ್ಟು ಉತ್ತಮ ಸ್ಥಿತಿಯಲ್ಲಿದ್ದಿತ್ತೆಂದು ಬುಕ್ಯಾನನ್ ಬರೆದಿದ್ದಾನೆ. ಇದರಿಂದ ಆಹಾರದ ಕೊರತೆ ಇಲ್ಲಿ ಹೆಚ್ಚಾಗಿರಲಿಲ್ಲವೆಂದೇ ಹೇಳಬಹುದು. ಆಹಾರ

ದೃಷ್ಟಿಯಿಂದ ಶ್ರೀರಂಗಪಟ್ಟಣ ಪ್ರದೇಶ ಸ್ವಯಂ ಪರಿಪೂರ್ಣವಾಗಿತ್ತೆಂದು ಹೇಳಬಹುದು. ಕೃಷಿಗೆ ಬೇಕಾದ ಪಶುಸಂಪತ್ತನ್ನು ಹೊರಗಡೆಯಿಂದ ಆಮದು ಮಾಡಿಕೊಳ್ಳುತ್ತಿದ್ದರು.

ವ್ಯಾಪಾರ ಮತ್ತು ಸಾರಿಗೆ ದೃಷ್ಟಿಯಿಂದ ಶ್ರೀರಂಗಪಟ್ಟಣ ದಕ್ಷಿಣ ಭಾರತದ ಪ್ರಮುಖ ಕೇಂದ್ರವಾಗಿ 18ನೇ ಶತಮಾನದಲ್ಲಿ ಬೆಳೆಯಿತು. ಪ್ರಮುಖ ಸಗಟು ವ್ಯಾಪಾರ ಕೇಂದ್ರವಾಗಿದ್ದ ಶ್ರೀರಂಗಪಟ್ಟಣ ದೇಶ ವಿದೇಶಗಳ ವರ್ತಕರನ್ನು ಆಕರ್ಷಿಸಿದ್ದಿತು. ಇಲ್ಲಿನ ಸುಂಕಗಳು ವ್ಯಾಪಾರ ವ್ಯವಹಾರಗಳ ಏಳು ಬೀಳುಗಳು, ಪ್ರಗತಿ ಅವನತಿಗಳ ಮೇಲೆ ಅವಲಂಬಿಸಿದ್ದವು. ಒಟ್ಟಾರೆ ಇಲ್ಲಿನ ಅರ್ಥವ್ಯವಸ್ಥೆಯಲ್ಲಿ ಆಳುವ ವರ್ಗ ಮತ್ತು ವ್ಯಾಪಾರಿ ವರ್ಗಗಳು ಸಹಕಾರದಿಂದ ನಡೆಯುತ್ತಿದ್ದವು. ಇದರ ಜೊತೆಗೆ ಶ್ರಮಿಕ ವರ್ಗವು ಸಹ ಶ್ರಮವಹಿಸಿ ದುಡಿದಿದ್ದನ್ನು ಕಾಣಬಹುದು. ಹೀಗಾಗಿ ಸಮಕಾಲೀನ ದಾಖಲೆಗಳಲ್ಲಿ ಶ್ರೀರಂಗಪಟ್ಟಣದ ಸಮೃದ್ಧಿಯ ಆರ್ಥಿಕ ಚಿತ್ರಣ ದೊರೆಯುತ್ತದೆ.

ಎರಡನೆಯದಾಗಿ, ಶ್ರೀರಂಗಪಟ್ಟಣದ ಸಾಮಾಜಿಕ ರಚನೆ ವರ್ಣವ್ಯವಸ್ಥೆಗನುಸಾರವಾಗಿ ಇತ್ತೆಂದು ಹೇಳಬಹುದು. ಬ್ರಾಹ್ಮಣರು ಇಲ್ಲಿಯ ಸಮಾಜದ ಧಾರ್ಮಿಕ ಮುಖಂಡರಾಗಿದ್ದರು. ಇಲ್ಲಿನ ದೇವಾಲಯಗಳು ಮತ್ತು ಮಠಗಳು ಅವರ ಪ್ರಭಾವಕ್ಕೆ ಒಳಗಾಗಿದ್ದವು. ಅವರು ಆಡಳಿತದಲ್ಲೂ ಹಾಗೂ ಧಾರ್ಮಿಕ ರಂಗದಲ್ಲೂ ಅನೇಕ ರೀತಿಯ ಗೌರವ ಸ್ಥಾನಗಳನ್ನು ಪಡೆದು ಕೊಂಡಿದ್ದರು. ಆಳುವ ವರ್ಗದ ಮುಖಂಡರಾಗಿದ್ದ ಒಡೆಯರು ಅಲ್ಲಿನ ಸಮಾಜದ ಶಿಸ್ತು ಮತ್ತು ಶಾಂತಿ ಪರಿಪಾಲನೆಗೆ ಸಹಾಯ ಮಾಡುತ್ತಿದ್ದರು. ಅನೇಕ ಜಾತಿಗಳಿಗೆ ಸೇರಿದ ಅಧಿಕಾರ ವರ್ಗದ, ಊಳಿಗ ವರ್ಗದ ಹಾಗೂ ವ್ಯಾಪಾರ ವರ್ಗದ ಜನರು ವಾಸಿಸುತ್ತಿದ್ದರು. ಮುಸ್ಲಿಂರು ಮತ್ತು ಕ್ರೈಸ್ತರು ಸಹ ಇಲ್ಲಿನ ಸಾಮಾಜಿಕ ವ್ಯವಸ್ಥೆಯ ಭಾಗವಾಗಿದ್ದರು. ಶ್ರೀರಂಗಪಟ್ಟಣದ ಸಮಾಜದಲ್ಲಿ ಜಾತಿಗಿಂತ ಹೆಚ್ಚಾಗಿ ಪ್ರತಿಭೆಗೆ ಗೌರವವಿತ್ತೆನ್ನಬಹುದು. ಇದಕ್ಕೆ ಒಂದೆರಡು ಉದಾಹರಣೆಗಳನ್ನು ಕೊಡಬಹುದು. ಕಳಲೆ ಮನೆತನದ ದಳವಾಯಿಗಳು ವೀರಶೈವರಾಗಿದ್ದರು. ಹೈದರ್ ಮತ್ತು ಟಿಪ್ಪು ಸುಲ್ತಾನರು ಮುಸ್ಲಿಮರಾಗಿದ್ದರು. ವಿಶಾಲಾಕ್ಷ ಪಂಡಿತನೆಂಬ ಮಂತ್ರಿ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಜೈನ ಧರ್ಮೀಯನಾಗಿದ್ದನು. ಆದುದರಿಂದ ಇಲ್ಲಿನ ಸಮಾಜದ ರಚನೆಯಲ್ಲಿ ಶ್ರೇಣೀಕೃತ ವ್ಯವಸ್ಥೆ ಇದ್ದರೂ ಸಹ ಅದು ಜಿಗುಟಾಗಿರಲಿಲ್ಲ. ಎಲ್ಲಕ್ಕಿಂತ ಮಿಗಿಲಾಗಿ ಶ್ರೀರಂಗಪಟ್ಟಣದ ಸಮಾಜ ದಲ್ಲಿ ಸಹಬಾಳ್ವೆ ಮತ್ತು ಸಹಿಷ್ಣುತೆಯ ಮೌಲ್ಯಗಳು ಹೆಚ್ಚು ಪ್ರಭಾವವನ್ನು ಬೀರಿದ್ದವು. ಅಲ್ಲಿ ಜಾತಿ ಇದ್ದಿರಬಹುದಾದರೂ ಜಾತೀಯತೆಯ ಅಪಾಯಗಳು ಇರಲಿಲ್ಲ. ಅದೇ ರೀತಿ ಕೋಮುಗಳಿದ್ದರೂ,

ಕೋಮು ಸೌಹಾರ್ದತೆ ನೆಲೆಸಿತ್ತು. ವರ್ಗಗಳಿದ್ದರೂ ವರ್ಗಸಂಘರ್ಷ ಇರಲಿಲ್ಲ. ಸಂಪ್ರದಾಯತೆಗಳಿದ್ದರೂ ಅದು ಕೇವಲ ಗೊಡ್ಡು ತರಹದ ಆಚರಣೆಯಾಗಿರಲಿಲ್ಲ. ಸಮಾಜ ಜೀವನ ಕ್ರಾಂತಿಕಾರಕವಲ್ಲದಿದ್ದರೂ ಸುಧಾರಿತ ದೃಷ್ಟಿಕೋನವುಳ್ಳದ್ದಾಗಿತ್ತು. ಪ್ರಾಯಶಃ ಇದಕ್ಕೆ ಅಲ್ಲಿ ದಟ್ಟವಾಗಿ ಹರಡಿದ್ದ ಶ್ರೀ ವೈಷ್ಣವ ಪ್ರಭಾವವೆಂದು ತೋರುತ್ತದೆ.

ಮೂರನೆಯದಾಗಿ, ಧಾರ್ಮಿಕ ದೃಷ್ಟಿಯಿಂದ ನೋಡಿದಾಗ ಶ್ರೀರಂಗಪಟ್ಟಣವು ಕ್ರಿ.ಶ. 1336 ರಿಂದ 1800 ರವರೆಗೂ ಪ್ರಧಾನವಾಗಿ ಶ್ರೀ ವೈಷ್ಣವ ನೆಲೆಯಾಗಿ ಬೆಳೆದು ಪ್ರಗತಿ ಹೊಂದಿತು. ಶೈವ ಮತ್ತು ಜೈನ ಹಾಗೂ ಜಾನಪದ ಕುರುಹುಗಳು ಇಲ್ಲಿ ಕಂಡುಬಂದರೂ ಹೆಚ್ಚಾಗಿ ಇದರ ಬೆಳವಣಿಗೆ ಸಾಕಷ್ಟಿರಲಿಲ್ಲ. ಇದಕ್ಕೆ ಆಳರಸರ ಧಾರ್ಮಿಕ ಧೋರಣೆ ಕಾರಣವಾಗಿರಬಹುದು. ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳು ಶ್ರೀರಂಗಪಟ್ಟಣದೊಡನೆ ತಮ್ಮ ಸಂಬಂಧಗಳನ್ನು ಕಲ್ಪಿಸಿಕೊಂಡಿದ್ದವು. ಸಿನ್ನಾಮಿ ಮತ್ತು ಬುಕ್ಯಾನನ್ ಎಂಬ ಇಬ್ಬರು ಪಾಶ್ಚಿಮಾತ್ಯ ಕ್ರೈಸ್ತರು ಶ್ರೀರಂಗಪಟ್ಟಣವನ್ನು ಸಂದರ್ಶಿಸಿದರು. ಒಟ್ಟಿನಲ್ಲಿ ಶ್ರೀರಂಗಪಟ್ಟಣವು ಧಾರ್ಮಿಕ ವೈವಿಧ್ಯತೆಯ ನೆಲೆಯಾಗಿತ್ತು. ಇದಲ್ಲದೆ ಧಾರ್ಮಿಕ ಸಹಿಷ್ಣುತೆ ಇಲ್ಲಿನ ಜನಜೀವನದ ಒಂದು ಮುಖ್ಯವಾದ ಮೌಲ್ಯವಾಯಿತು.

ಒಟ್ಟಿನಲ್ಲಿ ಶ್ರೀರಂಗಪಟ್ಟಣದ ವಲಯದೊಳಗೆ ರಾಜಕೀಯ ಸ್ಥಿರತೆಯಲ್ಲಿ ಬಹುಮುಖ್ಯವಾದ ಮೌಲ್ಯಗಳನ್ನು ಪ್ರತಿಪಾದಿಸಿತು. ನೆಮ್ಮದಿಯ ಆರ್ಥಿಕ ನೆಲೆಗಟ್ಟನ್ನು ಮೈಗೂಡಿಸಿಕೊಂಡು ಉತ್ತಮ ಸಮಾಜವನ್ನು ಬೆಳೆಸಿ ಧಾರ್ಮಿಕ ಬೆಳವಣಿಗೆಗಳ ರಂಗದಲ್ಲಿ ವೈವಿಧ್ಯತೆಯಲ್ಲಿ ಏಕತೆ ಎಂಬ ತತ್ವವನ್ನು ಶ್ರೀರಂಗಪಟ್ಟಣವು ಕರ್ನಾಟಕದ ಇತಿಹಾಸದಲ್ಲಿ ಎತ್ತಿಹಿಡಿಯುತ್ತಾ, ಭಾರತೀಯ ಸಂಸ್ಕೃತಿಯನ್ನು ಪ್ರತಿಪಾದಿಸಿದ ಪರಮತ ಸಹಿಷ್ಣುತೆ ಮತ್ತು ಸಹಬಾಳ್ವೆಯ ತತ್ವಗಳನ್ನು ಇದು ರಕ್ಷಿಸಿ ಬೆಳೆಸಿತು.

# ಆಧಾರಗ್ರಂಥಗಳು

## 1) ಪ್ರಾಥಮಿಕ ಆಧಾರಗಳು


1) ಎಫಿಗ್ರಾಫಿಯ ಕರ್ನಾಟಕ ಸಂ.6 (ಎನ್.ಎಸ್) (ಪರಿಷ್ಕೃತ) ಮೈಸೂರು 1977.

2) ಮೈಸೂರು ಪುರಾತತ್ವ ಇಲಾಖೆಯ ವರದಿ 1908–1941

3) ಮದ್ರಾಸು ಎಫಿಗ್ರಾಫಿಸ್ಟ್ಸ ವರದಿ 1910–1938

4) ರೈಸ ಬಿ.ಎಲ್. ಎಫಿಗ್ರಾಫಿಯಾ ಆಫ್ ಕರ್ನಾಟಕ ಸಂ. 1–12, ಬೆಂಗಳೂರು 1904


## 2) ಅಪ್ರಕಟಿತ ಸಮಕಾಲೀನ ಗ್ರಂಥಗಳು


1) ಚಿಕ್ಕದೇವರು – ಚಿಕ್ಕದೇವರಾಜ ಸಪ್ತಪದಿ (ಎಂ.ಎಸ್.ನಂ.ಬಿ.67ಪಿ) ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು

2) ಚಿಕ್ಕದೇವರಾಜ – ಚಿಕ್ಕದೇವರಾಜ ಭಿನ್ನಪಂ (ಎಂ.ಎಸ್. ನಂ.32) ಪ್ರಾ.ವಿ.ಸಂ. ಮೈಸೂರು, ಕರ್ನಾಟಕ ಕವಿಚರಿತೆ 455, 457–455.

3) ಚಿಕ್ಕದೇವರಾಜ – ಗೀತಾಗೋಪಾಲ (ಎಂ.ಎಸ್.ನಂ.ಎ749ಪಿ) ಪ್ರಾ.ವಿ.ಸಂ. ಮೈಸೂರು

4) ಚಿದಾನಂದ – ಮುನಿವಂಶಾಭ್ಯುದಯ (ಎಂ.ಎಸ್.ನಂ.ಎ.198ಪಿ) ಪ್ರಾ.ವಿ.ಸಂ. ಮೈಸೂರು

5) ಚಿಕ್ಕೋಪಾಧ್ಯಾಯ (1678–1680) – ಕಮಲಾಚಲ ಮಹಾತ್ಮೆ (1672) (ನಂ.ಕೆ.ಬಿ.38) ಪ್ರಾ.ವಿ.ಸಂ. ಮೈಸೂರು

6) ಚಿಕ್ಕೋಪಾಧ್ಯಾಯ – ಹಸ್ತಿಗಿರಿ ಮಹಾತ್ಮೆ (ಎಂ.ಎಸ್.ನಂ. ಬಿ.61 ಪಿ) ಪ್ರಾ.ವಿ.ಸಂ. ಮೈಸೂರು.

7) ಚಿಕ್ಕೋಪಾಧ್ಯಾಯ – ವೆಂಕಟಗಿರಿ ಮಹಾತ್ಮೆ (ಎಂ.ಎಸ್.ನಂ. 18–4–18 ಪಿ.2) ಓರಿಯಂಟಲ್ ಲೈಬ್ರರಿ ಮದ್ರಾಸು

8) ಚಿಕ್ಕೋಪಾಧ್ಯಾಯ – ಶ್ರೀರಂಗ ಮಹಾತ್ಮೆ (ಎಂ.ಎಸ್. ನಂ.ಬಿ.270 ಪಿ) ಪ್ರಾ.ವಿ.ಸಂ. ಮೈಸೂರು

9) ಚಿಕ್ಕೋಪಾಧ್ಯಾಯ – ಪಶ್ಚಿಮರಂಗ ಮಹಾತ್ಮೆ (ಎಂ.ಎಸ್. ನಂ.18–6–11) ಓರಿಯಂಟಲ್ ಲೈಬ್ರರಿ ಮದ್ರಾಸ್

10) ಚಿಕ್ಕೋಪಾಧ್ಯಾಯ - ಯಾದವಗಿರಿ ಮಹಾತ್ಮೆ (ಎಂ.ಎಸ್. 18-21- 16 ಪಿ.2) ಓರಿಯಂಟಲ್ ಲೈಬ್ರರಿ ಮದ್ರಾಸ್

11) ತಿರುಮಲಾರಾಯ - ಚಿಕ್ಕದೇವರಾಜ ವಂಶಾವಳಿ (ಎಂ.ಎಸ್.ನಂ.1035 ಪ್ರಾ.ವಿ.ಸಂ. ಮೈಸೂರು ಕರ್ನಾಟಕ ಕವಿಚರಿತೆ 11, 461 469-1465

12) ತಿರುಮಲರಾಯ - ಚಿಕ್ಕದೇವರಾಜ ವಿಜಯಂ (ಎಂ.ಎಸ್.ನಂ.137) ಪ್ರಾ.ವಿ.ಸಂ. ಮೈಸೂರು

13) ತಿರುಮಲರಾಯ - ಅಪ್ರತಿಮ ವೀರಚರಿತಂ (ಎಂ.ಎಸ್.ನಂ.109) ಪ್ರಾ.ವಿ.ಸಂ. ಮೈಸೂರು

14) ಮಲ್ಲಿಕಾರ್ಜುನ - ಶ್ರೀರಂಗ ಮಹಾತ್ಮೆ (1678) (ಎಂ.ಎಸ್.ನಂ. ಬಿ.52 ಪಿ) ಪ್ರಾ.ವಿ.ಸಂ. ಮೈಸೂರು

15) ಶ್ರೀರಂಗಪಟ್ಟಣ ಚರಿತೆ - (ಎಂ.ಎಸ್.ನಂ. ಕೆ.ಬಿ.25) ಪ್ರಾ.ವಿ.ಸಂ. ಮೈಸೂರು

**ಇತ್ತೀಚಿನ ಗ್ರಂಥಗಳು (ಸಮಕಾಲೀನ ಗ್ರಂಥಗಳು)**

1) ಕಳಲೆ ಅರಸುಗಳ ವಂಶಾವಳಿ ಅಥವಾ ವೇಣುಪುರ ಕ್ಷತ್ರಿಗಳ ವಂಶಾವಳಿ (1830) (ಎಂ.ಎಸ್.ನಂ. ಬಿ.424 ಪಿ) ಪ್ರಾ.ವಿ.ಸಂ. ಮೈಸೂರು
2) ದೇವಚಂದ್ರ – ರಾಜಾವಳಿ ಕಥೆ (1830) (ಎಂ.ಎಸ್.ನಂ. ಕೆ.ಎ.65)
3) ನೂರೊಂದ - ಸುಂದರ ಕಾವ್ಯ (1740) (ಎಂ.ಎಸ್.ನಂ. ಬಿ. 285 ಪಿ) ಪ್ರಾ.ವಿ.ಸಂ. ಮೈಸೂರು
4) ಮೈಸೂರು ದೊರೆಗಳ ಪೂರ್ವ ವಂಶಾಭ್ಯುದಯ ವಿವರ (ಎಂ.ಎಸ್. ನಂ. ಕೆ.ಎ.273) ಪ್ರಾ.ವಿ.ಸಂ. ಮೈಸೂರು
5) ಮೈಸೂರು ದೊರೆಗಳ ಪೂರ್ವಾಭ್ಯುದಯ ವಿವರ (1714) ಮದ್ರಾಸು ಓರಿಯಂಟಲ್ ಲೈಬ್ರಿ ಹಸ್ತಪ್ರತಿಗಳ ಸಂಗ್ರಹದಲ್ಲಿರುವ ಮೆಕಂಜಿ ಹಸ್ತಪ್ರತಿ.
6) ಮೈಸೂರು ದೊರೆಗಳ ವಂಶಾವಳಿ (1800 (ಎಂ.ಎಸ್.ನಂ. 336 ಪಿ)

## ಸಮಕಾಲೀನ ಸಾಹಿತ್ಯ ಪ್ರಕಟಿತ ಗ್ರಂಥಗಳು


| | | |
|---|---|---|
| 1) | ಅನಂತರಾಮು ಕೆ. | ಸಕ್ಕರೆಯ ಸೀಮೆ ಮೈಸೂರು 1982 |
| 2) | ಗೋವಿಂದ ವೈದ್ಯ | ಕಂಠೀರವ ನರಸರಾಜ ವಿಜಯ (1648) (ಸಂ) ಶಾ.ಶಾಸ್ತ್ರಿ ಕ.ಅ.ಸಂ. ಮೈಸೂರು 1971 |
| 3) | ಚಿಕ್ಕದೇವರಾಜ | ಚಿಕ್ಕದೇವರಾಜ ಭಿನ್ನಪಂ (1700) ಕರ್ನಾಟಕ ಕಾವ್ಯ ಕಲಾನಿಧಿ ಮಾಲೆ, ಸಂಖ್ಯೆ 15 ಮೈಸೂರು 1905 |
| 4) | ಚಿದಾನಂದ ಕವಿ | ಮುನಿ ವಂಶಾಭ್ಯುದಯಂ (1680) |
| 5) | ತಿರುಮಲರಾಯ | ಚಿಕ್ಕದೇವರಾಜ ವಂಶಾವಳಿ (1680) ಕರ್ನಾಟಕ ಕಾವ್ಯಾನಿಧಿ ಪ್ರಕಟಣೆ, ಮೈಸೂರು 1919 ಮತ್ತು ಕರ್ನಾಟಕ ಕಾವ್ಯ ಮಂಜರಿ (ಮಾಲೆ) ಸಂಖ್ಯೆ 13, ಮೈಸೂರು 1895 |
| 6) | ತಿರುಮಲರಾಯ | ಚಿಕ್ಕದೇವರಾಜ ವಿಜಯಂ (1686) ಕರ್ನಾಟಕ ಕಾವ್ಯಮಾಲೆ, ಸಂಖ್ಯೆ 17 ಮೈಸೂರು 1895 |
| 7) | ತಿರುಮಲರಾಯ | ಅಪ್ರತಿಮ ವೀರಚರಿತಂ (1700) ಕರ್ನಾಟಕ ಕಾವ್ಯಮಾಲೆ, ದ್ವಿತೀಯ ಮುದ್ರಣ, ಮೈಸೂರು 1931 |
| 8) | ನರಸಿಂಹಾಚಾರ್ ಆರ್ | ಕರ್ನಾಟಕ ಕವಿಚರಿತೆ, ಸಂಖ್ಯೆ 2 ಮತ್ತು 3, ಬೆಂಗಳೂರು 1919, 1929 |
| 9) | ನಾಯಕ ಹಾ.ಮಾ | ಮುಮ್ಮಡಿ ಕೃಷ್ಣರಾಜ ಒಡೆಯರು |
| 10) | ನಂಜಮ್ಮಣಿ ಎಂ. | ಅರಸು ಜನಾಂಗ ಒಂದು ಅಧ್ಯಯನ ಮೈಸೂರು 1986 |
| 11) | ರಾಮಕೃಷ್ಣರಾವ್ ಬಿ. | ಶ್ರೀ ಮನ್ಮಹರಾಜ ವಂಶಾವಳಿ ಭಾಗ 1,2 ಮೈಸೂರು ಸರ್ಕಾರ 1961 |
| 12) | ಬೆಟಗೇರಿ ಕೃಷ್ಣಶರ್ಮ | ಕರ್ನಾಟಕ ಜನಜೀವನ, ಧಾರವಾಡ 1955 |
| 13) | ರಾಜರತ್ನಂ ಜೆ.ಪಿ | ನಮ್ಮ ಒಡೆಯರ ಕಥೆಗಳು, 1924 |
| 14) | ಲಿಂಗಣ್ಣ ಕವಿ | ಕೆಳದಿ ನೃಪಂ ವಿಜಯ (1800) ಪ್ರಾ.ವಿ.ಸಂ. ಕನ್ನಡ ಕಾವ್ಯ ಮಾಲೆ ಸಂಖ್ಯೆ 9, ಮೈಸೂರು |
| 15) | ಸೋಸಲೆ ಅಯ್ಯಶಾಸ್ತ್ರಿ | ಮೈಸೂರು ಮಹಾರಾಜ ಚರಿತ್ರೆ, ಧಾರವಾಡ 1976 |

| | | |
|---|---|---|
| 16) | ಶಿಂಗ್ರಯ್ಯ ಎಂ.ಡಿ | ಚಾಮರಾಜ ಒಡೆಯರವರ ಚರಿತ್ರೆ, ಮೈಸೂರು–1905 |
| 17) | ಶ್ರೀರಂಗ | ಗೌತಮನ ಶಾಪ, ತಿಪಟೂರು 1962 |
| 18) | ಸಾಲೆ, ತೂರೆ ಬಿ.ಎ. ಮತ್ತು ದೇಸಾಯಿ | ಕನ್ನಡನಾಡಿನ ಚರಿತ್ರೆ ಭಾಗ–1, ಅಮೃತ ಮಹೋತ್ಸವ ಮಾಲೆ 23 |

**ಸಂಪಾದನಾ ಗ್ರಂಥಗಳು**

1) ಶಿವಣ್ಣ ಕೆ.ಎಸ್. – ಕಳಲೆ ಮನೆತನದ ವೀರಶೈವ ದಳವಾಯಿಗಳು ಜಗದ್ಗುರು ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು –1994.

2) ಸಂಪದ್ಗಿರಿರಾವ್ – ಕರ್ನಾಟಕ ಪರಂಪರೆ ಸಂ.2, ಮೈಸೂರು ರಾಜ್ಯ ಸರ್ಕಾರ, ಬೆಂಗಳೂರು–1970.

**ಮಾಧ್ಯಮಿಕ ಆಧಾರಗಳು**

| | | |
|---|---|---|
| 1) | Rice B.L. | Mysore Gezzetter Vol. I, II West Minister, London, 1897 |
| 2) | Hayavadhana Rao C | Mysore Gazzetteer Vol. 11, Bangalore 1930 |
| 3) | Mandya District Gazzetteer Vol. | |

## Secondary Soruces

### A. Books

| | | |
|---|---|---|
| 1) | Abbe J. Dubois | Hindu Manners, customs and ceremonies, translates by H.K. Beauchamp, Oxford, 1897 |
| 2) | Aiyangar, Narayana and Srinivasachar | The Mysore Pradhans, Madras, 1902 |
| 3) | Aiyar, Sami Venkatadri | Bettada Arasu (Kannada) |
| 4) | Aiyar R | History of the Nayaks of Madura, 1924 |

| | | |
|---|---|---|
| 5) | Aiyangar S, Krishnaswami | Ancient India and South Indian History and Culture with Introduction by V.A.Smith, 1915 – Ancient |
| | Aiyangar S, Krishnaswami | The soruces of Vijayanagar History, Madras, 1919 |
| 6) | Ali B. Sheik | British Relations with Haidar Ali |
| | | Foreign policy of Tippu Sultan |
| | | Tipu Sultan A study in diplomacy and confrontation, Mysore 1982 |
| | | Tipu Sultan (Kannada) |
| 7) | Ali B. Sheik | The Hoysala Dynasty University 8 Mysore, 1972 |
| 8) | Archer Hidred | Early views of India The picturesque tourneys of Thomas and William Doriell, 1786-1794. |
| 9) | Basavaraj, L | Tirumalarya Mattu Chika Devaraja Wodeyar (Kannada) Karnatak University, Dharwad, 1972 |
| 10) | Betigeri Krishna Sharma | Karnataka Jana Jivaria, Samaja Pustakalaya Dharwad, 1971 |
| 11) | Bowring, B. Lewin | Hyder Ali and Tipu Sultan and the struggle with the Mussalman powers of the south, Oxford, 1893 |
| 12) | Buchanan Francis | A journey from Madras through the countries of Mysore, Canara and Malabar, 3 vols. |
| 13) | Burgess James | The chronology of Indian History – Medival and Modern Cosmo Publications, Delhi 6, 1972 |

| | | |
|---|---|---|
| 14) | Chitnis K.N | Keladi Polity, Karnataka University, Dharwad, 1874 |
| 15) | Crisp, B | The Mysore Revenue Regulations Translated form the Persian, Calcutta 9, 1792 |
| 16) | Dikshit, G.S | Studies in Keladi History, (Ed) |
| 17) | Dikshit, G.S | Local Self Government in medieval Karantaka, Dharwad 1964 |
| 18) | Dodwell | Catalogue of the Madras records, 1740-44, Madras, 1917 |
| 19) | Elliot and Dowson | The History of India as told by its own Historians, 8 volumes, London, 1867-1877 |
| 20) | Firishts Muhammad Khasim | History of the rise of the Mahamadan power in India, 1612. translated from the original Persian by John Briggs |
| 21) | Grant duff | A History of the Marathas, 2 vols, 1921 |
| 22) | Hayavadana Rao. C | History of Mysore, 3 vols, Bangalore, 1943 |
| 23) | Hayavadana Rao. C | Mysore Gezetteer, vol. ii, part iv |
| 24) | Heras | The Aravidu Dynasty of Vijayanagar, Madras, 1927 |
| 25) | Ismail B.K | Karnataka Temples and their role in socio economic life, Delhi, 1984 |
| 26) | JOIS, K. Gunda | Keladiya Sankshipta Itihasa (Kannda) 1963 |
| 27) | Josyer G.R. | History of Mysore under the Yadava Dynasty |
| 28) | Kane, P.V. | History of Dharmasastra, 5 vols, |
| 29) | Krishna Bhatt | The Dalvoy Family of Mysore |

| | | |
|---|---|---|
| 30) | Krishna Rao M.V | Karnataka Charitre B'lore 1959 |
| 31) | Krishna Rao P | A brief history of Mysore from the origin of the house of Mysore primises upto the death of Tipu Sultan |
| 32) | Miles, W | The History of Haider Naik (Translation of Meer Hussain Alikhan Kirmani's Nishan-e-Haidari) |
| 33) | Muddachari, B | The Mysore Maratha Relations in the 17 century, University of Mysore, 1969 |
| 34) | Muddachari B | Resistance of Mysore to the Maratha Expansion in the 18th Century |
| 35) | Mugali R.S. | History of Kannada Literature Mysore, 1964 |
| 36) | Mugali, R.S. | The Heritage of Karnataka, B'lore 1946 |
| 37) | Muthuna I.M | History of Karnataka, Mysore 1962 |
| 38) | Nagana Gowda | Pravasi Kanda Bharta |
| 39) | Puttana M.S. | Palyagars of Critradurga<br>- History of Ikkeri<br>- Pelegars of Hargalavadi B'lore 1931 |
| 40) | Rao, S.R. and Sastri, B.R.K | Traditional paintings of Karnataka Publ, Karnataka Chitrakala Parishath, B'lore 1980 |
| 41) | Rice Lewis | Mysore and Coorg from the Inscriptions, London, 1909 |
| | Rice Lewis | Mysore Gazetteer, 2 vols. |
| 42) | Salitore, B.A. | Social and Political Life in the Vijayanagar Empire, Vol.i & ii, Madras, 1934 |
| 43) | Sewell Robert | A Forgotten Empire (Vijayanagar) |
| 44) | Sharma, T.T. | Kanthirava Narasaraja Vijaya (Kannada) |

| | | |
|---|---|---|
| 45) | Shervani and Joshi (Ed) | History of Medieval Deccan, 2 vols. |
| 46) | Sharma Rao, M | A Brief History of Mysore (Kannada) |
| | Sharma Rao. M | Modern Mysore, vol 1 Bangalore, 1936 |
| 47) | Shivananda, V | Simapurusha Shadakshara Deva, Samaja Pustakalaya, Dharwar, 1966 |
| 48) | Sinha Narendra Krishna | Haidar Ali, Calcutta, 1949 |
| 49) | Sitaramaiya V (Ed) | Tirumalarya (Kannada) Kavikavya Parampare Series, No.17, B'lore 980 |
| 50) | Srinivasan, C.K | Maratha Rule in the Carnatic (Annamalai University, 1944) |
| 51) | Swaminathan | Role of Feudatories in Vijayanagar |
| 52) | Swaminathan K.d. | The Nayaks of Ikkeri, Madras, 1957 |
| 53) | Sastri Prof. K.A.NIlakantha | A History of South India, 4th Edition, Madras, 1976 |
| 54) | Taylor Wiliam | A Catalogue Raisonne of Oriental Manuscripts, 2 vols, Madras, 1857-1860 |
| | Taylor William | A catalogue Raisonne of Oriental Manscripts, Vol.-iii, Madras, 1862 |
| 55) | Tipperudraswamy | Karnataka Samskriti Samikshe (Kannada) |
| 56) | Varma | History fo Bijapur |
| 57) | Venkaiya | Narapati Vijayam or Ramarasiyamu (Telugu), Gustav Oppert (Ed), Madras |
| 58) | Venkata Ratnam, A.V. | Local self Government under Vijayanagar |
| 59) | Wilks Mark | Historical Sketches of South India in an attempt to trace the History of Mysore, 1930 |

# ನಿಯತಕಾಲಿಕೆಗಳು


| | | |
|---|---|---|
| 1) | Achyutarao,D.S. | The early Wodeyar's of Mysore and their Cultural Traditions; Cultural and Heritage, Quarterly Journal of Mythic Society, Bangalore, pp. 179-194 |
| 2) | Ferroli, S.J. | The General attitude of the Rajas of Mysore towards the ancient Missions of the S.J. Vol.25 (1947) Journal of IndianHistory, Trivandram, pp. 193-200 |
| 3) | Krishna Swamy Aiyangar S | The History of Mysore, Vol.31, (1940-41), Q.J.M.S. Bangalore, pp. 275-296 |
| 4) | Krishna, M.H | Shivaji and the Mysore Raj, Vol. 31, (1940-41), Q.J.M.S. Bangalore, pp. 380-383 |
| 5) | Ramachandra Rao, B | Poligars of Mysore and their Civilization, A study, Vol.30, (1938-39), Q.J.M.S. Bangalore, pp. 150-162 |
| 6) | Sarkar, J.N | (a) Shahji Bhonsle in Mysore Vol. XLVI, No.1, (July 1929), Modern Review, Calcutta, pp.7-12<br>(b) A page of from early Mysore History, Vol. XLVI, No.5, (Nov. 1929), Modern Review Calcutta, pp. 501-503 |
| 7) | Shama Sastri R | Malnad Chiozs, Vol. 13, (1923), Q.J.M.S. Bangalore, pp. 755-766 |
| 8) | Srikanta Sastri | Two Grants of Karnataka Raja of Mysore: Cultural and Heritage Number (1956) Q.J.M.S. Bangalore pp. 195-210 |
| 9) | Subba Rao, N | (a) Kanthirava Narasaraja Wodeyar of Mysore, (1638-1659), a study, Vol.3 (1929), Half |

| | | |
|---|---|---|
| | | yearly Journal of the Mysore University, pp. 139-168<br>(b) Devaraja Wodeyar of Mysore (1659-1673), A retrospeet, Vol.3, (1929), Half Years Journal of the Mysore University, pp. 74-96<br>(c) Raja Wodeyar of Mysore and by Suceessors, (1576-1638), Vol.4, (1930), Half yearly Journal of the Mysore Unviersity, pp.245-261<br>(d) Chikkadevaraja Wodeyar of Mysore and his successors (1673-1761), Vol.23, (1932-33), Q.J.M.S. Bangalore, pp. 26-42<br>(e) Two centuries of Wodeyar's Rule in Mysore (1565-1761), Vol.23, (1932-33), Q.J.M.S. Bangalore, pp.170-193. |

# ಸಂಕೇತಾಕ್ಷರಗಳು

1) ಎ.ಕ. (ಎನ್.ಎಸ್) – ಎಫಿಗ್ರಾಫಿಯ ಕರ್ನಾಟಕ (ನ್ಯೂಸೀರಿಸ್) ಎಫಿಗ್ರಾಫಿಯ ಕರ್ನಾಟಕ ಪರಿಷ್ಕೃತ ಆವೃತ್ತಿ.

2) ಕೃ.ಪೇ – ಕೃಷ್ಣರಾಜಪೇಟೆ

3) ಪಾಂ.ಪು – ಪಾಂಡವಪುರ

4) ಶ್ರೀ.ಪ. – ಶ್ರೀರಂಗಪಟ್ಟಣ

5) ಕಂ.ನ.ವಿ – ಕಂಠೀರವ ನರಸರಾಜ ವಿಜಯಂ

6) ಕ್ಯೂ.ಜೆ.ಎಂ.ಎಸ್ – ಕ್ವಾಟರ್ಲಿ ಜನರಲ್ ಆಫ್ ಮಿಥಿಕ್ ಸೊಸೈಟಿ


LORD CORNWALLIS' ARMY
1791 & 1792
CAVERY RIVER
FORT
MOSQUE
GANJAM
SCOTT'S BUNGALOW
COL. BAILLIE'S CENOTAPH
SITE OF TIPU'S LAL BAGH PALACE
TOMBS OF HAIDAR & TIPU
PASCHIMAVAHINI
MADRAS ARMY 1799
SKETCH MAP OF
THE ISLAND OF SERINGAPATAM